KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ನವೆಂಬರ್ ೨೬, ೨೦೦೯ (ಮಾರ್ಗಶಿರ ೫, ಶಕ ವರ್ಷ ೧೯೩೧) | ಸಂಚಿಕೆ ೪೭ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎಸ್‌ಡಿಕೆ/72/ಡಿಟಿಸಿಆರ್/2008–09, ದಿನಾಂಕ:21ನೇ ಆಗಸ್ಟ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**

ಪೊಲೀಸ್ ವೃತ್ತ ನಿರೀಕ್ಷಕರು,
ಸುಳ್ಯ ಪೊಲೀಸ್ ಠಾಣೆ, ಸುಳ್ಯ.

**ಆರೋಪಿಗಳು:**

1. ಮಹಮ್ಮದ್ ಕಮಲೂದ್ದೀನ್ ಅಲಿಯಾಸ್ ರಜಾಕ್, ಬಿನ್:ಅಬ್ದುಲ್, ಕರಾಯ ಶಾಲೆಯ ಬಳಿ, ಬೆಳ್ತಂಗಡಿ ತಾಲ್ಲೂಕು. ಹಾಲಿ ವಾಸ:ಎಡಂ ಅಡಪು ಮನೆ, ವಿದ್ಯಾನಗರ, ಕಾಸರಗೋಡು, ಕೇರಳ ರಾಜ್ಯ.
2. ನಾರಾಯಣ ಬಿನ್: ಮಹಾಲಿಂಗ, ಮಾದವ ಪೈ ಕಂಪೌಂಡ್ ಚರ್ಚ್ ಬಳಿ, ಕುಂಬಳೆ ಗ್ರಾಮ ಮತ್ತು ಅಂಚೆ, ಮಂಜೇಶ್ವರ ಕೇರಳ ರಾಜ್ಯ.

ಮತ್ತು ಇತರೆ ಇಬ್ಬರು ಆರೋಪಿಗಳು

**ವಾಹನ ಮಾಲೀಕರು:**

ಪತ್ತೆಯಾಗಿರುವುದಿಲ್ಲ.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ವೃತ್ತ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರಿಗೆ ದಿನಾಂಕ:4-8-2008 ರಂದು ಮಡಿಕೇರಿಯಿಂದ ಕಾಸರಗೋಡು ಕಡೆಗೆ ಟಾಟಾ 407 ಲಾರಿಯಲ್ಲಿ ಸ್ಪಿರಿಟ್ ಸಾಗಾಟ ವಾಗುತ್ತಿರುವ ಬಗ್ಗೆ ಬಂದ ಖಚಿತ ಮಾಹಿತಿ ಮೇರೆಗೆ ಸುಳ್ಯ ಪೊಲೀಸ್ ಠಾಣೆಯ ಉಪ ನಿರೀಕ್ಷಕರು ಮತ್ತು ಸಿಬ್ಬಂದಿಯೊಂದಿಗೆ ಸುಳ್ಯ ಪೇಟೆ ಕಡೆಯಿಂದ ಜ್ಯೂನಿಯರ್ ಕಾಲೇಜು ರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿರುವ ಸಂದರ್ಭದಲ್ಲಿ ಮಾಹಿತಿಯಂತೆ ಟಾಟಾ 407 ಲಾರಿಯೊಂದು ಬರುತ್ತಿರುವುದನ್ನು ಕಂಡು ಅದನ್ನು ನಿಲ್ಲಿಸಲು ಸೂಚಿಸಿದಾಗ ಚಾಲಕನು ಸುಳ್ಯ ಜ್ಯೂನಿಯರ್ ಕಾಲೇಜು ಕಡೆ ವಾಹನವನ್ನು ಓಡಿಸಲು ಪ್ರಯತ್ನಿಸಿದಾಗ ಅದನ್ನು ತಡೆದು ನಿಲ್ಲಿಸಿ ಲಾರಿಯನ್ನು ಪರಿಶೀಲಿಸಿದಾಗ ಅದರಲ್ಲಿ ನಾಲ್ಕು ಜನರಿದ್ದು ಅವರ ಪೈಕಿ ಇಬ್ಬರು ಓಡಿ ತಲೆಮರೆಸಿಕೊಂಡಿದ್ದು ನಂತರ ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ಬಾಡಿಯ ಮೇಲ್ಭಾಗದಲ್ಲಿ ಮುಸಂಬಿ ಹಣ್ಣುಗಳನ್ನು ತುಂಬಿಸಿಕೊಂಡಿದ್ದು ಅದರ ಅಡಿ ಭಾಗದಲ್ಲಿ ಭತ್ತದ ಹುಲ್ಲನ್ನು ಹಾಕಿ ಅದರ ಮರೆಯಲ್ಲಿ 35 ಲೀ ಸಾಮರ್ಥ್ಯದ ಸ್ಪಿರಿಟ್ ತುಂಬಿದ್ದ 67 ಬಿಳಿ ಬಣ್ಣದ ಪ್ಲಾಸ್ಟಿಕ್

ಕ್ಯಾನುಗಳಲ್ಲಿ ಸ್ಪಿರಿಟನ್ನು ಯಾವುದೇ ರಹದಾರಿ ಇಲ್ಲದೇ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 13(1)(A)(F) ರ ಪ್ರಕಾರ ಅಪರಾಧ ಹಾಗೂ 32,34, 38ಎ, 41(1)&(2)ರ ಪ್ರಕಾರ ಶಿಕ್ಷಾರ್ಹವಾಗಿರುವುದೆಂದು ಆರೋಪಿಗಳಾದ ಮಹಮ್ಮದ್ ಕಮಾಲುದ್ದೀನ್ ಅಲಿಯಾಸ್ ರಜಾಕ್, ಬಿನ್:ಅಬ್ದುಲ್, ಕರಾಯ ಶಾಲೆಯ ಬಳಿ, ಬೆಳ್ತಂಗಡಿ ತಾಲ್ಲೂಕು. (ಹಾಲಿ ವಾಸ:ಎಡಂ ಅಡಪು ಮನೆ, ವಿದ್ಯಾನಗರ, ಕಾಸರಗೋಡು, ಕೇರಳ ರಾಜ್ಯ) ಮತ್ತು ನಾರಾಯಣ ಬಿನ್: ಮಹಾಲಿಂಗ, ಮಾದವ ಪೈ ಕಂಪೌಂಡ್, ಚರ್ಚ್‌ಬಳಿ, ಕುಂಬಳೆ ಗ್ರಾಮ ಮತ್ತು ಅಂಚೆ, ಮಂಜೇಶ್ವರ ಕೇರಳ ರಾಜ್ಯ. ಇವರಿಗೆ ಅಕ್ರಮ ಮದ್ಯಸಾರದ ಬಗ್ಗೆ ತಿಳಿಯಪಡಿಸಿ, ಓಡಿಹೋದ ವ್ಯಕ್ತಿಗಳು ಸಜೀವನ್ (ವಿಳಾಸ ತಿಳಿದಿಲ್ಲ) ಹಾಗೂ ಶಬೀರ್ (ವಿಳಾಸ ತಿಳಿದಿಲ್ಲ) ಎಂದು ಖಚಿತ ಪಡಿಸಿಕೊಂಡು, ಸದರಿ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದು, ಅದಕ್ಕೆ ಬಟ್ಟೆದಾರ ಕಟ್ಟಿ ಸೀಲ್ ಮಾಡಿ, ನಂತರ ಸದರಿ 407 ಲಾರಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಅದರ ನೊಂದಣಿ ಸಂಖ್ಯೆ:KL-11-E-853 ಆಗಿರುತ್ತದೆ. ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಅಕ್ರಮವಾಗಿ ಹೊಂದಿದ್ದ ಮದ್ಯಸಾರ ಹಾಗೂ ಸಾಗಾಟಕ್ಕೆ ಬಳಸಿದ 407 ಲಾರಿಯನ್ನು ಇಲಾಖಾ ವಶಕ್ಕೆ ತೆಗೆದುಕೊಂಡು, ಆರೋಪಿಗಳ ವಿರುದ್ದ ಪೊಲೀಸ್ ವೃತ್ತ ನಿರೀಕ್ಷಕರು,ಸುಳ್ಯ ಪೊಲೀಸ್‌ಠಾಣೆ, ಸುಳ್ಯ ಇಲ್ಲಿನ ತಕ್ಷೀರು ಸಂಖ್ಯೆ:185/2008 ದಿ:5-8-2008 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಹಾಗೂ ದಾಖಲಾತಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ದಿ:13-8-2008 ರಂದು ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ಪ್ರಾದಿಕಾರದಲ್ಲಿ ಅನುಮತಿ ಕೋರಿದ ಮೇರೆಗೆ ಪ್ರಾಧಿಕಾರದ ದಿ:27-8-2008ರ ಅನುಮತಿ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರಿಗೆ ಹಸ್ತಾಂತರಿಸಲು ಅನುಮತಿ ಆದೇಶ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ಪತ್ರ ಸಂಖ್ಯೆ: ಸಿಆರ್‌ಎಂ/23/2008-09 ದಿ:24-9-2008 ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಈ ಕೆಳಗಿನ ಸೊತ್ತುಗಳನ್ನು ದಿ:12-9-2008 ರಂದು ಅವರು ಸ್ವೀಕರಿಸಿರುತ್ತಾರೆ.

1) ಟಾಟಾ 407 ಲಾರಿ ಸಂಖ್ಯೆ: KL–11–E–853.
2) ತಲಾ 35 ಲೀಟರ್‌ನಂತೆ ಸ್ಪಿರಿಟ್ ತುಂಬಿದ ಬಿಳಿ ಬಣ್ಣದ 67 ಪ್ಲಾಸ್ಟಿಕ್ ಕ್ಯಾನುಗಳಲ್ಲಿ-2,345.000 ಲೀ. ಮದ್ಯಸಾರ.

(ಪ್ರತಿಯೊಂದು ಕ್ಯಾನಿನಿಂದ ತಲಾ 180 ಎಂ ಎಲ್ ನಂತೆ ಒಟ್ಟು 67 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರ ತನಿಖಾ ವರದಿ ಸಂಖ್ಯೆ: ಸಿಆರ್ ಎಂ/23/2008-09, ದಿ:5-2-2009 ರ ತನಿಖಾ ವರದಿಯಲ್ಲಿ, ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ ಇವರು ಸಹಾಯಕ ರಾಸಾಯನಿಕ ವಿಶ್ಲೇಷಕರು,ಮಂಗಳೂರು ವಲಯ ಇವರಿಂದ ಪಡೆದು ಸಲ್ಲಿಸಿದ್ದ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ: ಇ–417-67 ದಿ:12-9-2008 ರ ವರದಿಯಲ್ಲಿ ಮದ್ಯಸಾರದ ಪ್ರಮಾಣ ಶೇ.93.5 ಇರುವುದಾಗಿ, ಹಾಗೂ ಮಾದರಿಗಳು ಮಾದಕ ಪೇಯ ತಯಾರಿಕೆಗೆ ಹಾಗೂ ಕೈಗಾರಿಕಾ ಉಪಯೋಗಕ್ಕೆ ಬಳಸಬಹುದಾದ ಮದ್ಯಸಾರವೆಂದು ದೃಡೀಕರಿಸಿ ರುತ್ತಾರೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ವರದಿಗಾಗಿ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಎರಡು ಬಾರಿ ಕೋರಲಾಗಿದ್ದು, ಸದ್ರಿ ವರದಿ ಸ್ವೀಕೃತವಾಗದೇ ಇರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಒಡೆತನ ನಿರೂಪಿಸಿ ಯಾರೊಬ್ಬರೂ ಬಿಡುಗಡೆಗಾಗಿ ಪ್ರಯತ್ನಿಸದೇ ಇರುವುದರಿಂದ ತಕ್ಷೀರಿನಲ್ಲಿ ಹಸ್ತಾಂತರಗೊಂಡ ಈ ಮೇಲಿನ ವಾಹನ ಸಮೇತ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮದ್ಯಸಾರವನ್ನು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರ ತನಿಖಾ ವರದಿಯನ್ನು ಆಧರಿಸಿ, ಈ ಪ್ರಾಧಿಕಾರದ ಆದೇಶ ಸಂಖ್ಯೆ:ಎಸ್‌ಡಿಕೆ/72/ಡಿಟಿಸಿಆರ್/2008-09 ದಿ:8-7-2009ರ ಆದೇಶದಲ್ಲಿ ಈ ಕೆಳಕಂಡ ಸೊತ್ತುಗಳನ್ನು (ಮಾದರಿಗಳನ್ನು ಹೊರತುಪಡಿಸಿ) ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿರುತ್ತದೆ.

| | |
|---|---|
| 1. | 35 ಲೀಟರ್ ಗಾತ್ರದ 67 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಸುಮಾರು 2345-000 ಲೀಟರ್ ಮದ್ಯಸಾರ. |

ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಸರಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ ಪಿಐಎಸ್/2007 ದಿ:13–7–2007 ರಂತೆ ಮಾರಾಟ ಮಾಡಲು ನಿಷೇಧಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ನಾಶಪಡಿಸುವಂತೆ ಆದೇಶವಿರುವುದರಿಂದ, ಸದರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43(ಎ)3 ರ ಅನ್ವಯ ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ ಇವರ ಸಮಕ್ಷಮ ಮತ್ತು ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ ಹಾಗೂ ವ್ಯವಸ್ಥಾಪಕರು, ಕೆ.ಎಸ್.ಬಿ.ಸಿ.ಎಲ್. ಡಿಪೋ, ಪುತ್ತೂರು ಇವರನ್ನು ಮತ್ತು ಸ್ಥಳೀಯ

ಸಾರ್ವಜನಿಕರು ಹಾಗೂ ಮಾಧ್ಯಮ ಪತ್ರಿಕಾ ವರದಿಗಾರರನ್ನು ಸೇರಿಸಿ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ:ಇಸಿಸಿ/73/ಸಿಆರ್‌ಎಂ/2004 ದಿ:12–9–05 ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ ಮದ್ಯಸಾರವನ್ನು ನಾಶಪಡಿಸಲು ಆದೇಶಿಸಿದೆ ಹಾಗೂ ಉಳಿದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಲು ಆದೇಶಿಸಿದೆ.

ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡ ವಾಹನ ಸಂ:KL-11E-853 ಟಾಟಾ 407 ಲಾರಿಯ ಬಿ ರಿಜಿಸ್ಟ್ರಾರ್ ಎಕ್ಸ್ ಟ್ರಾಕ್ಟ್ ವರದಿಯನ್ನು ನೀಡುವಂತೆ ಪ್ರಾದೇಶಿಕ ಸಾರಿಗೆ ಅದಿಕಾರಿಗಳು, ಕೋಝಿಕೋಡ್,ಕೇರಳ ರಾಜ್ಯ ಇವರಿಗೆ ದಿ:25-3-2009ರಂದು ಈ ಪ್ರಾದಿಕಾರದಿಂದ ಹಾಗೂ ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ ಇವರಿಂದ ಎರಡು ಬಾರಿ ಪತ್ರ ಮುಖೇನಾ ಕೋರಿಕೊಂಡರೂ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿ ಸದ್ರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಸ್ವೀಕೃತವಾಗಿರುವುದಿಲ್ಲ. ಸದ್ರಿ ವಾಹನದ ಮೌಲ್ಯ ಮಾಪನ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,ಪುತ್ತೂರು ಇವರಿಂದ ಪಡೆದು ಅಬಕಾರಿ ನಿರೀಕ್ಷಕರು,ಸುಳ್ಯ ವಲಯ ಇವರು ಪ್ರಾದಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ಮೌಲ್ಯ ಮಾಪನ ವರದಿಯ ಪ್ರಕಾರ ವಾಹನವು ಟಾಟಾ ಕಂಪೆನಿಯ ತಯಾರಿಕಾ ವಾಹನವಾಗಿದ್ದು,ವಾಹನದ ಚಾಸೀಸ್ ಸಂ:0814864, ಇಂಜಿನ್ ಸಂ: ಅಸ್ಪಷ್ಟವಾಗಿರುತ್ತದೆ ಮತ್ತು ವಾಹನದ ಸ್ಥಿತಿಗತಿಗನುಸಾರವಾಗಿ ಮೌಲ್ಯ ಮಾಪನ ರೂ.1,80,000/- ಎಂದು ದೃಡೀಕರಿಸಿ ಪತ್ರ ನೀಡಿರುತ್ತಾರೆ.

ವಾಹನದ ಮಾಲೀಕತ್ವವನ್ನು ತಿಳಿಯಲು ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯು ಏಕೈಕ ದಾಖಲೆಯಾಗಿದ್ದು, ಸದ್ರಿ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅದಿಕಾರಿಗಳು ನೀಡದೇ ಇರುವುದರಿಂದ ವಾಹನದ ಮಾಲೀಕತ್ವದ ಬಗ್ಗೆ ಮಾಹಿತಿಯನ್ನು ಪಡೆಯಲು ಈ ಪ್ರಾಧಿಕಾರದಲ್ಲಿ ಸಾಧ್ಯವಾಗಿರುವುದಿಲ್ಲ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ದಿ:04–8–2008ರಂದು ವಶಪಡಿಸಿ ಕೊಂಡು ಈಗಾಗಲೇ 1 ವರ್ಷ ಕಳೆದರೂ, ಪ್ರಕರಣದಲ್ಲಿ ದಸ್ತಗಿರಿಯಾದ ಆರೋಪಿಗಳಾಗಲೀ, ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಪ್ರಕರಣ ದಾಖಲಿಸಿಕೊಂಡ ಸುಳ್ಯ ಪೊಲೀಸ್ ಠಾಣೆಯಲ್ಲಾಗಲೀ, ಪ್ರಕರಣದ ತನಿಖೆ ಕೈಗೊಂಡ ಸುಳ್ಯ ಅಬಕಾರಿ ವಲಯ ಕಛೇರಿಯಲ್ಲಾಗಲೀ ಅಥವಾ ಈ ಪ್ರಾದಿಕಾರದಲ್ಲಾಗಲೀ ಹಾಜರಾಗಿ ವಾಹನದ ಬಿಡುಗಡೆಗಾಗಿ ಯಾರೂ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಸದರಿ ವಾಹನದಲ್ಲಿ ಜನೋಪಯೋಗಿ ವಸ್ತುವಾದ ಹಣ್ಣುಹಂಪಲು ಸಾಗಾಟ ಮಾಡುವ ನೆಪದಲ್ಲಿ ಅದರ ಮರೆಯಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ 67 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಮದ್ಯಸಾರವನ್ನು ತುಂಬಿಸಿ ಅಕ್ರಮ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾದಿಕಾರವು ಮನಗಂಡು ಮುಟ್ಟುಗೋಲು ನಡವಳಿಯನ್ನು ಪ್ರಾರಂಭಿಸಲಾಗಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳ ಉತ್ತರ ಪಡೆಯಲಾಗಿರುತ್ತದೆ.

1) ಮೊದಲನೇ ವಿವಾದಾಂಶ: ದಿ: 5-8-2008 ರಂದು KL-11-E-853 ಎಂಬ ಸಂಖ್ಯಾ ಫಲಕ ಹೊಂದಿರುವ ಟಾಟಾ 407 ಲಾರಿಯಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

ಪ್ರಾಸಾ: 1

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀಮತಿ.ಗೀತಾ. ಪಿ.,ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ ಇವರು ದಿ:19-8-2009ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ವಿಚಾರಣೆ ನೀಡುತ್ತಾ, ತಾನು ಕಳೆದ ನಾಲ್ಕು ವರ್ಷಗಳಿಂದ ಸುಳ್ಯ ಅಬಕಾರಿ ಉಪ ನಿರೀಕ್ಷಕಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ:2-9-2008 ರಂದು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ ಜಿಲ್ಲೆ ಇವರ ದಿ:27-8-2008ರ

ಆದೇಶದಂತೆ ಸುಳ್ಯ ಪೊಲೀಸ್ ಠಾಣಾ ಕ್ರೈಂ ಸಂ:185/2008 ದಿ:5-8-2008ರ ಮೊಕದ್ದಮೆಗೆ ಸಂಬಂಧಿಸಿದ ದಾಖಲೆ ಮತ್ತು ಸೊತ್ತುಗಳಾದ ಟಾಟಾ 407 ಲಾರಿ ಸಂ: KL-11-E-853 ಮತ್ತು 35 ಲೀ ಗಾತ್ರದ 67 ಪ್ಲಾಸ್ಟಿಕ್ ಕ್ಯಾನುಗಳಲ್ಲಿ 2345 ಲೀ ಮದ್ಯಸಾರವನ್ನು ಪಡೆದುಕೊಂಡಿರುತ್ತೇನೆ. ಸದ್ರಿ ಪ್ರಕರಣದ ಮುದ್ದೆ ಮಾಲುಗಳನ್ನು ಹಸ್ತಾಂತರ ಪಡೆದುಕೊಂಡ ಬಗ್ಗೆ ದಿ:24-9-2008ರಂದು ಅಧಿಕೃತ ಅಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತೇನೆ. ಸದ್ರಿ ಜಪ್ತು ಪಡಿಸಿಕೊಂಡ ಮದ್ಯಸಾರದ ಮಾದರಿಗಳನ್ನು ಪೊಲೀಸ್ ಅಧಿಕಾರಿಗಳೇ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ವಿಶ್ಲೇಷಣಾ ವರದಿಯ ಪ್ರತಿಯನ್ನು ಪೊಲೀಸ್ ಅಧಿಕಾರಿಗಳಿಂದ ಪಡೆದುಕೊಂಡಿರುತ್ತೇನೆ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ "ಬಿ" ವಹಿ ವರದಿಗಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಾಸರಗೋಡು ಜಿಲ್ಲೆ ಇವರಿಗೆ ಬರೆಯಲಾಗಿದ್ದು,ಸದ್ರಿಯವರಿಂದ ಬಿ ವರದಿ ಸ್ವೀಕೃತವಾಗದೇ ಇರುವುದರಿಂದ ಪ್ರಕರಣದಲ್ಲಿ ಜಪ್ತಾದ ವಾಹನ ಸಮೇತ ಎಲ್ಲಾ ಮುದ್ದೆ ಮಾಲುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪ್ರಸ್ತುತ ಸರ್ಕಾರದ ಅಧಿಸೂಚನೆಯಂತೆ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ನಾಶಪಡಿಸ ಬೇಕಾಗಿರುವುದರಿಂದ, ಮುಟ್ಟುಗೋಲು ಹಾಕಿ ಕೊಂಡ ಸದ್ರಿ ಮದ್ಯಸಾರವನ್ನು ನಾಶಪಡಿಸಲು ಆದೇಶ ನೀಡುವಂತೆ ದಿ:5-2-2009ರಂದು ಅಧಿಕೃತ ಅಧಿಕಾರಿಗಳ ಪ್ರಾದಿಕಾರಕ್ಕೆ ವರದಿ ಸಲ್ಲಿಸಿರುತ್ತೇನೆ. ಅದರ ಪ್ರಕಾರ ಪ್ರಾದಿಕಾರದ ದಿ:8-7-2009ರ ಅದೇಶದಲ್ಲಿ ಜಪ್ತು ಪಡಿಸಿಕೊಳ್ಳಲಾದ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿರುತ್ತದೆ. ಸದ್ರಿ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ದಿ:20-7-2009ರಂದು ಮಹಜರು ಜರುಗಿಸಿ ಅಬಕಾರಿ ಉಪ ಅಧೀಕ್ಷಕರು,ಪುತ್ತೂರು ಉಪ ವಿಭಾಗ,ಪುತ್ತೂರು ಇವರ ಸಮಕ್ಷಮದಲ್ಲಿ ನಾಶಪಡಿಸ ಲಾಗಿರುತ್ತದೆ. ವಾಹನದ"ಬಿ"ವರದಿಯನ್ನು ನೀಡುವಂತೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಲ್ಲಿ ಎರಡು ಬಾರಿ ಪತ್ರ ಮುಖೇನಾ ವಿನಂತಿಸಿಕೊಂಡರೂ ಸದ್ರಿ ಸಾರಿಗೆ ಪ್ರಾಧಿಕಾರಿಗಳಿಂದ ವರದಿ ಬಂದಿರುವುದಿಲ್ಲ .ಕಾರಣ ಸದ್ರಿ ವಾಹನವನ್ನು ಜಪ್ತುಪಡಿಸಿಕೊಂಡು 11 ತಿಂಗಳುಗಳು ಕಳೆದಿರುವುದರಿಂದ ಸದ್ರಿ ವಾಹನದ ಸ್ಥಿತಿಗತಿ ,ವಾತಾವರಣದ ವೈಪರೀ ತ್ಯದಿಂದ ಕ್ಷೀಣ ಗೊಳ್ಳುವ ಸಾಧ್ಯತೆ ಇದ್ದು,ಇದರಿಂದ ಸರ್ಕಾರಕ್ಕೆ ಅರ್ಥಿಕ ನಷ್ಟವುಂಟಾಗುವ ಸಂಭವವಿರುವುದರಿಂದ ಸದ್ರಿ ವಾಹನವನ್ನು ಸಹಾ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳುವಂತೆ ದಿ:14-7-2009ರಂದು ಮಾನ್ಯ ಅಧಿಕೃತ ಅಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತೇನೆ. ಪೊಲೀಸ್ ವೃತ್ತ ನಿರೀಕ್ಷಕರು,ಸುಳ್ಯ ಪೊಲೀಸ್ ಠಾಣೆ ಇವರ ಕ್ರೈಂ ಸಂ:185/2008 ದಿ:5-8-2008ಇದರ ಪ್ರತಿಯನ್ನು ಪ್ರಾಧಿಕಾರದಲ್ಲಿ ಈಗ ನೋಡಿ ಅದನ್ನು ನಿಶಾನೆ ಪಿ-1 ಎಂದು, ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರತಿಯನ್ನು ನಿಶಾನೆ ಪಿ-2 ಎಂದೂ, ಸೊತ್ತು ಮುಟ್ಟುಗೋಲು ಸಂಬಂಧ ಪ್ರಾದಿಕಾರಕ್ಕೆ ಸಲ್ಲಿಸಿದ್ದ ತನಿಖಾ ವರದಿ ದಿ:5-2-2009ರ ಪ್ರಸ್ತಾವನೆಯನ್ನು ನಿಶಾನೆ ಪಿ-3 ಎಂದೂ ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ-3 ಎ ಎಂದೂ, ದಿ:14-7-2009ರಂದು ಸಲ್ಲಿಸಿದ್ದ ಪ್ರಸ್ತಾವನೆಯನ್ನು ನಿಶಾನೆಪಿ-4 ಎಂದೂ , ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ-4 ಎ ಎಂದೂ ವಿಚಾರಣೆ ವೇಳೆಯಲ್ಲಿ ಗುರುತಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದೇ ಇರುವ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:5-8-2008 ರಂದು ಜಪ್ತುಪಡಿಸಿಕೊಂಡಿರುವ ಟಾಟಾ 407 ಲಾರಿ ಸಂಖ್ಯೆ: KL-11-E-853 ಇದರಲ್ಲಿ ಹಣ್ಣು ಹಂಪಲು ಸಾಗಾಟದ ನೆಪದಲ್ಲಿ ಸದ್ರಿ ಸೊತ್ತುಗಳ ಮರೆಯಲ್ಲಿ 67 ಮದ್ಯಸಾರ ತುಂಬಿಸಿದ ಕ್ಯಾನುಗಳನ್ನು ಅಡಗಿಸಿ ಅಕ್ರಮವಾಗಿ 2345.000 ಲೀಟರ್ ಮದ್ಯಸಾರವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಣಿಕೆ ಮಾಡಿರುವುದರಿಂದ ವಾಹನದ ಮಾಲೀಕರು ಅಥವಾ ತತ್ಸಂಬಂಧ ವ್ಯಕ್ತಿಗಳು ತಮ್ಮ ತಿಳುವಳಿಕೆಯಿಂದಲೇ ಈ ಅಪರಾಧವೆಸಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಲು, ಅಥವಾ ಪ್ರಕರಣದಲ್ಲಿ ತಮ್ಮ ನಿರಾಪರಾಧಿತ್ವವನ್ನು ಸಾಬೀತುಪಡಿಸಲು ಯಾವುದೇ ದಾಖಲಾತಿಗಳನ್ನು ಪ್ರಾದಿಕಾರದ ಮುಂದೆ ಒದಗಿಸಲು ವಿಫಲರಾಗಿರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು

ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಪೊಲೀಸ್ ವೃತ್ತ ನಿರೀಕ್ಷಕರು, ಸುಳ್ಯ ಇವರು ಸುಳ್ಯ ಪೊಲೀಸ್ ಠಾಣಾ ತಕ್ಷೀರು ಸಂಖ್ಯೆ: 185/2008 ದಿ:5-8-2008 ರಂದು ದಾಖಲಿಸಿದ ಪ್ರಕರಣದಲ್ಲಿ ಆರೋಪಿಗಳು ಜನೋಪಯೋಗಿ ಹಣ್ಣುಹಂಪಲು ಸೊತ್ತುಗಳೊಂದಿಗೆ ಅಕ್ರಮವಾಗಿ 67 ಮದ್ಯಸಾರ ತುಂಬಿದ ಕ್ಯಾನುಗಳಲ್ಲಿ 2345.000 ಲೀಟರ್ ಮದ್ಯಸಾರ ಸಾಗಾಣಿಕೆ ಮಾಡುವುದನ್ನು ಪತ್ತೆಹಚ್ಚಿ, ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯಸಾರವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಟಾಟಾ 407 ಲಾರಿ ಸಂಖ್ಯೆ: KL-11-E-853 ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಕಳೆದರೂ ಈ ಪ್ರಾಧಿಕಾರದ ಮುಂದೆ ಅಥವಾ ತಕ್ಷೀರು ದಾಖಲಿಸಿದ ಸುಳ್ಯ ಪೊಲೀಸ್ ಠಾಣೆ ಮತ್ತು ಸುಳ್ಯ ವಲಯ ಕಚೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರು ಅಥವಾ ಆರೋಪಿಗಳು ವಾಹನದ ಮಾಲೀಕತ್ವ ನಿರೂಪಿಸಿ ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ತನಿಖಾ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಹಲವಾರು ಬಾರಿ ಪತ್ರ ವ್ಯವಹಾರ ನಡೆಸಿದ್ದರೂ ಸದ್ರಿಯವರಿಂದ ಯಾವುದೇ ವರದಿ ಬಾರದೇ ಇರುವುದರಿಂದ, ವಾಹನದ ಮಾಲೀಕರ ಬಗ್ಗೆ ವಿವರಗಳನ್ನು ಪಡೆಯಲು ಸಾಧ್ಯವಾಗಿರುವುದಿಲ್ಲ. ಹಾಗೂ ವಾಹನದಲ್ಲಿ ಹಣ್ಣುಹಂಪಲು ಸಾಗಾಟ ಮಾಡುವ ನೆಪದಲ್ಲಿ ಸದ್ರಿ ಸೊತ್ತುಗಳ ಮರೆಯಲ್ಲಿ ಅಕ್ರಮವಾಗಿ ಮದ್ಯಸಾರ ತುಂಬಿದ 67 ಕ್ಯಾನುಗಳನ್ನು ಇರಿಸಿ 2345.000 ಲೀಟರ್ ಸಾಗಾಣಿಕೆ ಮಾಡಿರುವುದು ಪ್ರಕರಣದ ದಾಖಲಾತಿಗಳಿಂದ ಸಾಬೀತಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರು ಅಕ್ರಮ ಮದ್ಯಸಾರ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ದಸ್ತಗಿರಿಯಾದ ಆರೋಪಿಗಳು ಖುದ್ದಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆದುದರಿಂದ ವಾಹನ ಮಾಲೀಕರೇ ಸ್ವತ: ತನ್ನ ಲಾರಿಯಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯಸಾರ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಲಾರಿಯು ಈಗಾಗಲೇ 1 ವರ್ಷ ಕಳೆದರೂ ಅದರ ಮಾಲೀಕತ್ವದ ಬಗ್ಗೆ ಹಾಗೂ ವಾಹನದ ಬಿಡುಗಡೆ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಅಕ್ರಮ ಮದ್ಯಸಾರ ಸಾಗಾಟಕ್ಕೆ ಬಳಸಿದ KL-11-E-853 ಟಾಟಾ 407 ಲಾರಿ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಸಿ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/72/ಡಿಟಿಸಿಆರ್/2008–09, ದಿನಾಂಕ:21ನೇ ಆಗಸ್ಟ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಂ 43 (ಬಿ) ಅಡಿ ಕ್ರಮ ಜರುಗಿಸಿ, ಪೊಲೀಸ್ ವೃತ್ತ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ ಇವರ ಕ್ರೈಂ ಸಂ: 185/2008 ದಿ:5-8-2008 ರಲ್ಲಿ ಜಪ್ತುಪಡಿಸಿಕೊಂಡಿರುವ ಟಾಟಾ 407 ಲಾರಿ ಸಂ: KL-11-E-853 ನ್ನು ನಿಯಮ 43(ಸಿ) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:21-08-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ–1: ಶ್ರೀಮತಿ.ಗೀತಾ, ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ,ಸುಳ್ಯ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಪೊಲೀಸ್ ಕ್ರೈಂ ಸಂ:185/2008 ದಿ:5-8-2008ರ ಪ್ರತಿ

ನಿಶಾನೆ ಪಿ–2 : ರಾಸಾಯನಿಕ ವಿಶ್ಲೇಷಕರ ವರದಿ

ನಿಶಾನೆ ಪಿ–3 : ದಿ:5-2-2009ರ ಪ್ರಸ್ತಾವನಾ ವರದಿ

ನಿಶಾನೆ ಪಿ–3 ಎ : ಅದರ ಮೇಲಿನ ಸಹಿ.

ನಿಶಾನೆ ಪಿ–4 : ದಿ:14-7-2009ರ ಪ್ರಸ್ತಾವನಾ ವರದಿ.

ನಿಶಾನೆ ಪಿ–4 ಎ : ಅದರ ಮೇಲಿನ ಸಹಿ.

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.905

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/183/ಡಿಟಿಸಿಆರ್/2006–07 ದಿನಾಂಕ:28ನೇ ಆಗಸ್ಟ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು,
ಪುತ್ತೂರು ಪೊಲೀಸ್ ಠಾಣೆ,
ಪುತ್ತೂರು.

**ಆರೋಪಿಗಳು:**

1) ಹ್ಯಾರಿಸ್, ಬಿನ್ ಅಬೂಬಕ್ಕರ್, ಗೋಳ್ತಮಜಲು ಮನೆ, ಗೋಳ್ತಮಜಲು ಗ್ರಾಮ, ಬಂಟ್ವಾಳ.
2) ಹ್ಯಾರಿಸ್, ಬಿನ್ ಕೆ.ಇಬ್ರಾಹಿಂ, ವಾಸ :ಕಲ್ಲಡ್ಕ, ಸರ್ಕಾರಿ ಪ್ರೌಢ ಶಾಲೆ ಹತ್ತಿರ, ಬಂಟ್ವಾಳ ತಾಲ್ಲೂಕು.
3) ಸಿದ್ದಾರ್ಥ, ಬಿನ್:ಅಚ್ಯುತನ್, ಡೈಕಟೀಲ್, ಹಂದಿಕಾಡು, ತ್ರಿಶೂಲ್ ಜಿಲ್ಲೆ, ಕೇರಳ.
4) ಸತೀಶ್, ಬಿನ್:ರಾಮೇಗೌಡ, ಜವೇಗಲ್, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ.
5) ಜಯರಾಜ್, ಬಿನ್ ಶ್ರೀನಿವಾಸ, ಕೆರೆಕಟ್ಟೆ, ಶೃಂಗೇರಿ ತಾಲ್ಲೂಕು.

**ವಾಹನ ಮಾಲೀಕರು:**

ಶ್ರೀ ಅಬ್ಬಾಸ್, ಬಿನ್: ಖಾಸಿಮ್,ವಾಸ:ಇಸ್ಲಮಾಬಾದ್ ಹೌಸ್, ಚಾರ್ಮಾಡಿ ಗ್ರಾಮ, ಬೆಳ್ತಂಗಡಿ ತಾಲ್ಲೂಕು.
(ಜೀಪ್ ಸಂ:ಕೆಎ–19ಎ–5742 )

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:09-11-2006 ರಂದು ಪುತ್ತೂರು ನಗರ ಪೊಲೀಸ್ ಠಾಣೆಯ ಪೊಲೀಸ್ ನಿರೀಕ್ಷಕರು ಇವರಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಪುತ್ತೂರಿನಿಂದ ಕೇರಳ ರಾಜ್ಯದ ಕಾಸರಗೋಡು ಕಡೆಗೆ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಮಾರುತಿ ಕಾರಿನಲ್ಲಿ ಸಾಗಿಸುತ್ತಿರುವುದಾಗಿ ತಿಳಿದ ಮೇರೆಗೆ ತಮ್ಮ

ಇಲಾಖಾ ಜೀಪಿನಲ್ಲಿ ಹೊರಟು, ಬೋಳುವಾರು ಹಳೆಯ ಆರ್.ಟಿ.ಒ ಕಚೇರಿ ಜಂಕ್ಷನ್‌ನಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ರಾತ್ರಿ ಸುಮಾರು 9-00 ಗಂಟೆ ಸಮಯದಲ್ಲಿ ಹಾರಾಡಿ ಕಡೆಯಿಂದ ಕಬಕ ಕಡೆಗೆ ಬರುತ್ತಿದ್ದ ಮಾರುತಿ 800 ಕಾರನ್ನು ಸಂಶಯದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ, ಕಾರಿನ ಚಾಲಕನು ಕಾರನ್ನು ಮುಂದಕ್ಕೆ ಚಲಾಯಿಸಿಕೊಂಡು, ನಂತರ ಬೆನ್ನಟ್ಟಿ, ಪುತ್ತೂರು ಕರ್ಮಲ್ ಕಡೆಗೆ ಹೋಗುವ ರಸ್ತೆಯ ಬಳಿ ಸದ್ರಿ ಕಾರನ್ನು ಓವರ್ ಟೇಕ್ ಮಾಡಿ, ಕಾರಿನಲ್ಲಿದ್ದ ಇಬ್ಬರು ವ್ಯಕ್ತಿಗಳನ್ನು ಬೆನ್ನಟ್ಟಿ ಹಿಡಿದು, ವಿಚಾರಿಸಿದಾಗ ಅವರು ಸಮರ್ಪಕವಾದ ಉತ್ತರವನ್ನು ನೀಡಿರುವುದಿಲ್ಲ. ಸದ್ರಿ ಸ್ಥಳಕ್ಕೆ ಪಂಚರನ್ನು ಕರೆಯಿಸಿ,ಪಂಚರ ಸಮಕ್ಷಮ ಕಾರಿನ ಹಿಂದಿನ ಸೀಟನ್ನು ಪರಿಶೀಲಿಸಿದಾಗ 11 ಪ್ಲಾಸ್ಟಿಕ್ ಗೋಣಿ ಚೀಲಗಳಿರುವುದು ಕಂಡು ಬಂತು . ಪಂಚರ ಸಮಕ್ಷಮ ಸದ್ರಿ ಪ್ಲಾಸ್ಟಿಕ್ ಗೋಣಿ ಚೀಲವನ್ನು ಕಾರಿನ ಒಳಗಿನಿಂದ ಹೊರತೆಗೆದು, ಪರಿಶೀಲಿಸಿದಾಗ ಎಲ್ಲಾ ಗೋಣಿ ಚೀಲಗಳಲ್ಲಿ ಸಾರಾಯಿ ಸ್ಯಾಚೆಟ್‌ಗಳಿರುವುದು ಕಂಡು ಬಂತು. ತಲಾ 500 ರಂತೆ ಒಟ್ಟು 100 ಎಂ.ಎಲ್‌ನ 5500 ಸಾರಾಯಿ ಸ್ಯಾಚೆಟ್‌ಗಳು ಇರುವುದು ಕಂಡು ಬಂತು. ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡಲು ರಹದಾರಿ ಪತ್ರಗಳು ಇದೆಯೇ ಎಂದು ವಿಚಾರಿಸಿದಾಗ ಸದ್ರಿಯವರ ಪೈಕಿ ಹ್ಯಾರಿಸ್, ಬಿನ್:ಅಬೂಬಕ್ಕರ್, ಗೋಳ್ತಮಜಲು ಮನೆ, ಗೋಳ್ತಮಜಲು ಗ್ರಾಮ,ಬಂಟ್ವಾಳ ಇವರು ಕಾರಿನ ಚಾಲಕನಾಗಿದ್ದು, ಇನ್ನೊಬ್ಬನ ಹೆಸರು ಹ್ಯಾರಿಸ್,ಬಿನ್:ಕೆ.ಇಬ್ರಾಹಿಂ,ವಾಸ :ಕಲ್ಲಡ್ಕ,ಸರ್ಕಾರಿ ಪ್ರೌಢ ಶಾಲೆ ಹತ್ತಿರ,ಬಂಟ್ವಾಳ ತಾಲೂಕು ಎಂದು ಹೇಳಿದನು. ಸಾರಾಯಿ ಸ್ಯಾಚೆಟ್‌ಗಳನ್ನು ಪುತ್ತೂರು ಅಬಕಾರಿ ಗುತ್ತಿಗೆದಾರ ಕೆಲಸದವನಾದ ಸತೀಶ್,ಜಯರಾಜ ಮತ್ತು ಸಿದ್ದಾರ್ಥ ಎಂಬವರು ಜೀಪ್ ಸಂ:ಕೆ.ಎ-19ಎ-5742 ರಲ್ಲಿ ಎ.ಪಿ.ಎಂ.ಸಿ ರಸ್ತೆಯ ರೈಲ್ವೆ ಕ್ರಾಸ್ ಬಳಿ ತಂದು ಕೊಟ್ಟಿದ್ದನ್ನು ಪಡಕೊಂಡಿದ್ದು, ಇದನ್ನು ಕೇರಳ ರಾಜ್ಯದ ಕಾಸರಗೋಡಿಗೆ ಕಾರಿನಲ್ಲಿ ಮಾರಾಟಕ್ಕೆ ಸಾಗಿಸುತ್ತಿರುವುದಾಗಿ ತಿಳಿಸಿದನು. ಸದ್ರಿ ಸಮಯದಲ್ಲಿ ಸಾರಾಯಿ ಸಾಗಾಣಿಕೆ ಮಾಡಲು ಯಾವುದೇ ರಹದಾರಿ ಪತ್ರ ಹಾಗೂ ಪರವಾನಗಿಯನ್ನು ಹಾಜರುಪಡಿಸದಿರುವ ಕಾರಣಕ್ಕೆ ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32(1),34,43(ಎ) ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ ಗೋಣಿಚೀಲದಲ್ಲಿದ್ದ ಒಟ್ಟು 5500 ಸಾರಾಯಿ ಸ್ಯಾಚೆಟ್‌ಗಳನ್ನು ಹಾಗೂ ಸಾಗಾಟಕ್ಕೆ ಬಳಸಿದ ಮಾರುತಿ 800 ಕಾರು ಸಂ:ಕೆ.ಎ-05ಎಂ-3705ನ್ನು ಮಹಜರು ಮುಖೇನ ಪಂಚರ ಸಮಕ್ಷಮ ಅಮಾನತ್ತುಪಡಿಸಲಾಯಿತು. ಆರೋಪಿಗಳಿಬ್ಬರನ್ನು ಸ್ಥಳದಲ್ಲೇ ದಸ್ತಗಿರಿ ಮಾಡಿ,ಮುಂದಿನ ಕ್ರಮ ಕೈಗೊಳ್ಳಲಾಯಿತು. ಸಾರಾಯಿಯಿಂದ ಸ್ಯಾಂಪಲ್‌ಗಾಗಿ ತೆಗೆದು ಅದಕ್ಕೆ ಬಿಳಿ ಬಟ್ಟೆಯನ್ನು ಸುತ್ತಿ,ಪಂಚರ ಸಮಕ್ಷಮ ಎಸ್.ಹೆಚ್.ಒ ಅರಗು ಸೀಲು ಹಾಕಿ,ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು. ನಂತರ ತನಿಖೆಯನ್ನು ಮುಂದುವರಿಸಿ,ಕಾರಿನಲ್ಲಿದ್ದ ಸಾರಾಯಿ ಸ್ಯಾಚೆಟ್‌ಗಳ ಮಾಲೀಕತ್ವದ ಬಗ್ಗೆ ವಿಚಾರಿಸಿದಾಗ ಸಾರಾಯಿಯನ್ನು ಪುತ್ತೂರು ತಾಲೂಕಿನ ಸಾರಾಯಿ ಗುತ್ತಿಗೆದಾರರ ಕೆಲಸದವರಾದ ಸತೀಶ್, ಜಯರಾಜ್ ಮತ್ತು ಸಿದ್ದಾರ್ಥ ಇವರುಗಳು ಎ.ಪಿ.ಎಂ.ಸಿ ರಸ್ತೆಯ ರೈಲ್ವೆ ಬಳಿ ಜೀಪು ಸಂ: ಕೆ.ಎ-19ಎ-5742ರಲ್ಲಿ ತಂದುಕೊಟ್ಟಿದ್ದು, ಈ ಬಗ್ಗೆ ಯಾವುದೇ ಅಧಿಕೃತ ದಾಖಲಾತಿಗಳನ್ನು ಹಾಜರುಪಡಿಸಿರುವುದಿಲ್ಲ. ಪುತ್ತೂರು ಸಾರಾಯಿ ಗುತ್ತಿಗೆದಾರರ ಕಚೇರಿಯ ಎದುರುಗಡೆ ನಿಲ್ಲಿಸಲಾದ ಜೀಪನ್ನು ವಶಪಡಿಸಿಕೊಂಡು, ಮಹಜರನ್ನು ಸ್ಥಳದಲ್ಲೇ ತಯಾರಿಸಿ, ಆರೋಪಿಗಳ ವಿರುದ್ಧ ತಕ್ಷೀರು ಸಂ:147/2006 ದಿ:09-11-2006 ರಂತೆ ಮೊಕದ್ದಮೆ ದಾಖಲಿಸಿ, ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಸದ್ರಿ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಮುಂದಿನ ತನಿಖೆಯ ಬಗ್ಗೆ ಅಬಕಾರಿ ಉಪ ನಿರೀಕ್ಷಕರು(ನಂ.1)ಜಾರಿ ಮತ್ತು ತನಿಖೆ,ಪುತ್ತೂರು ಇವರಿಗೆ ಈ ಪ್ರಾಧಿಕಾರದ ಆದೇಶ ಸಂ:ಎಂಎನ್‌ಜಿ/ಇಎಬಿ/18/2006-07 ದಿ:01-12-2006 ರಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನಗಳನ್ನು ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ಪೊಲೀಸ್ ಉಪ ನಿರೀಕ್ಷಕರು,ಪುತ್ತೂರು ಪೊಲೀಸ್ ಠಾಣೆ,ಪುತ್ತೂರು ಇವರು ದಿ:18-12-2006 ರಂದು ಅಬಕಾರಿ ಉಪ ನಿರೀಕ್ಷಕರು(ನಂ.1) ಜಾರಿ ಮತ್ತು ತನಿಖೆ,ಪುತ್ತೂರು ಇವರಿಗೆ ಹಸ್ತಾಂತರಿಸಿರುತ್ತಾರೆ.

ಜೀಪು ಸಂ:ಕೆ.ಎ-19ಎ-5742ರ ಆರ್.ಸಿ ಮಾಲೀಕರಾದ ಶ್ರೀ ಅಬ್ಬಾಸ್, ಬಿನ್:ಖಾಸಿಮ್, ಚಾರ್ಮಾಡಿ ವಿಲೇಜ್, ಬೆಳ್ತಂಗಡಿ ತಾಲೂಕು ಇವರು ತಮ್ಮ ವಕೀಲರ ಮುಖಾಂತರ ದಿ:30-12-2006 ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಕೋರಿರುತ್ತಾರೆ.

ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,ಇ.ಐ.ಬಿ, ದ.ಕ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದ ಕರ್ನಾಟಕ ಅಬಕಾರಿ ಕಾಯಿದೆ 43(ಬಿ)ಅಡಿಯಲ್ಲಿ ನೀಡಲಾಗಿರುವ ನೋಟೀಸು ಸಂ:ಇಐಬಿ/ಡಿಟಿಸಿಆರ್/183/2006-07 ದಿ:03-01-2007 ರಲ್ಲಿ ಸದ್ರಿ ಮಧ್ಯಂತರ ಬಿಡುಗಡೆಗಾಗಿ

ಸಲ್ಲಿಸಿದ ಅರ್ಜಿಯ ಬಗ್ಗೆ ವಿಚಾರಣೆಯನ್ನು ನಿಗದಿಪಡಿಸಿ, ಸದ್ರಿ ದಿನಾಂಕದಂದು ಮೂಲ ದಾಖಲಾತಿಗಳೊಂದಿಗೆ ಹಾಜರಾಗಲು ಸೂಚಿಸಲಾಗಿರುತ್ತದೆ.ವಾಹನ ನಿರೀಕ್ಷಕರು, ಪುತ್ತೂರು ಇವರು ವಾಹನದ ಮೌಲ್ಯ ರೂ.78,000/–ಗಳಾಗಬಹುದೆಂದು ದಿ:29–01–2007ರಂದು ದೃಢೀಕರಣ ಪತ್ರ ನೀಡಿರುವುದರಿಂದ ಹಾಗೂ ವಾಹನದ ಮಾಲೀಕರು ವಾಹನದ ಮೂಲ ದಾಖಲಾತಿಗಳನ್ನು ಸಲ್ಲಿಸಿರುವುದರಿಂದ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,ಇ.ಐ.ಬಿ,ದ.ಕ ಜಿಲ್ಲೆ,ಮಂಗಳೂರು ಇವರ ಮದ್ಯಂತರ ಆದೇಶ ಸಂಖ್ಯೆ ದಿ:22–02–2007 ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಹೀಂದ್ರ ಜೀಪು ಸಂ:ಕೆ.ಎ–19ಎ–5742 ನ್ನು ರೂ.1,00,000/- ಬ್ಯಾಂಕ್ ಗ್ಯಾರೆಂಟಿಯನ್ನು ಒದಗಿಸಿದಲ್ಲಿ ಹಾಗೂ ಇತರೆ ಷರತ್ತುಗಳನ್ವಯ ಅರ್ಜಿದಾರರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ. ಸದ್ರಿ ಆದೇಶದಂತೆ ಅರ್ಜಿದಾರರು ಈ ಪ್ರಾಧಿಕಾರಕ್ಕೆ ರೂ.1,00,000/- ಬ್ಯಾಂಕ್ ಗ್ಯಾರೆಂಟಿಯನ್ನು ಬ್ಯಾಂಕ್ ಆಫ್ ಮಹಾರಾಷ್ಟ್ರ,ಬಸವನಗುಡಿ ಶಾಖೆ,ಬೆಂಗಳೂರು ಇಲ್ಲಿಂದ ಪಡೆದು, ಈ ಪ್ರಾದಿಕಾರಕ್ಕೆ ಒಪ್ಪಿಸಿರುವುದರಿಂದ ಸದ್ರಿ ವಾಹನವನ್ನು ಅಬಕಾರಿ ಉಪ ನಿರೀಕ್ಷಕರು(ನಂ.2)ಜಾರಿ ಮತ್ತು ತನಿಖೆ,ಪುತ್ತೂರು ಇವರು ದಿ:16–06–2007 ರಂದು ಸ್ವೀಕೃತಿ ರಶೀದಿಯೊಂದಿಗೆ ಮಾಲೀಕರ ಪರ ಮದ್ಯಂತರ ಸುಪರ್ದಿಗೆ ಬಿಡುಗಡೆಗೊಳಿಸಲಾಗಿರುತ್ತದೆ.

ಪ್ರಕರಣದ ತನಿಖೆಯನ್ನು ಮುಂದುವರಿಸಿದ ಅಬಕಾರಿ ಉಪ ನಿರೀಕ್ಷಕರು(ನಂ.1)ಜಾರಿ ಮತ್ತು ತನಿಖೆ,ಪುತ್ತೂರು ಇವರ ತನಿಖಾ ವರದಿ ಸಂ:21/2006–07 ದಿ:08–01–2007 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನಗಳ ಬಿ ಅಬ್‌ಸ್ಟ್ರಾಕ್ಟ್ ವರದಿಯನ್ನು ಸಾರಿಗೆ ಅಧಿಕಾರಿ,ಜಯನಗರ, ಬೆಂಗಳೂರು ಇವರಿಂದ ಪಡೆಯಲಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂ:ಕೆ.ಎ–05ಎಂ–3705 ರ ಬಿ ಅಬ್‌ಸ್ಟ್ರಾಕ್ಟ್ ವರದಿಯಲ್ಲಿ ಆ ಸಂಖ್ಯೆಯ ವಾಹನ ಬಜಾಜ್ ಆಟೋ ರಿಕ್ಷಾವಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನಕ್ಕೆ ಬಳಸಿದ ಸಂಖ್ಯೆ ಆಟೋರಿಕ್ಷಾದ ನೊಂದಣಿ ಸಂಖ್ಯೆಯಾಗಿದ್ದು, ತಕ್ಷೀರಿನಲ್ಲಿ ನಮೂದಿಸಿದ ಚಾಸಿಸ್ ನಂಬರಿಗೂ ಹಾಗೂ ಇಂಜಿನ್ ನಂಬರಿಗೂ ಒಂದಕ್ಕೊಂದು ತಾಳೆಯಾಗದೇ ಇರುವುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂ:ಕೆಎ–05 ಎಂ–3705 ನಕಲಿ ನಂಬರ್ ಆಗಿರುತ್ತದೆ ಎಂದು ದೃಢೀಕರಿಸಿ, ವರದಿಯನ್ನು ನೀಡಿರುತ್ತಾರೆ. ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳಿಂದ ತೆಗೆದ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸಲಾಗಿದ್ದು, ಕರ್ನಾಟಕ ಸರ್ಕಾರ ,ಸಹಾಯಕ ರಾಸಾಯನಿಕ ವಿಶ್ಲೇಷಕರು,ಮಂಗಳೂರು ಇವರ ಪತ್ರ ಸಂ:ಇ–451-11 ದಿ:29-12-2006 ರ ವರದಿಯಲ್ಲಿ ಸಾರಾಯಿಯ ಮದ್ಯಸಾರದ ಪ್ರಮಾಣ 37% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಮಾರುತಿ ಕಾರನ್ನು ಹಾಗೂ ಸಾರಾಯಿ ಸ್ಯಾಚೆಟ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸಾರಾಯಿಯನ್ನು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ, ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,ಇ.ಐ.ಬಿ,ದ.ಕ ಜಿಲ್ಲೆ,ಮಂಗಳೂರು ಇವರ ಮುಟ್ಟುಗೋಲು ಆದೇಶ ಸಂ:ಇ.ಐ.ಬಿ/ಡಿಟಿಸಿಆರ್/183/2006–07 ದಿ:13–02–2007 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ 100ಎಂ.ಎಲ್‌ನ 5500 ಸಾರಾಯಿ ಸ್ಯಾಚೆಟ್‌ಗಳನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಸಾರಾಯಿಯನ್ನು ಅಬಕಾರಿ ಉಪ ಅಧೀಕ್ಷಕರು,ಪುತ್ತೂರು ಉಪ ವಿಭಾಗ,ಪುತ್ತೂರು ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದ್ದು, ಸದ್ರಿ ಆದೇಶದಂತೆ ಅಬಕಾರಿ ಉಪ ಅಧೀಕ್ಷಕರು,ಪುತ್ತೂರು ಉಪ ವಿಭಾಗ,ಪುತ್ತೂರು ಇವರು ತಮ್ಮ ಸಿಬ್ಬಂದಿಯವರೊಂದಿಗೆ ಕೂಡಿಕೊಂಡು, ದಿ:26–02–2007 ರಂದು ಸಾರಾಯಿ ಸ್ಯಾಚೆಟ್‌ಗಳನ್ನು ನಾಶಪಡಿಸಿ,ಮಹಜರು ಜರುಗಿಸಿ,ವರದಿಯನ್ನು ಸಲ್ಲಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿ: 09-11-2006 ರಂದು ಮಾರುತಿ 800 ಕಾರು ಸಂಖ್ಯೆ: ಕೆಎ–05–ಎಂ–3705 ಮತ್ತು ಮಹೀಂದ್ರ ಜೀಪು ಸಂ: ಕೆಎ–19–ಎ–5742 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು

ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

ಪ್ರಾಸಾ: 1

ಪ್ರಾಸಿಕ್ಯೂಶನ್ ಪರ ಪ್ರಕರಣದ ಮುಖ್ಯ ಮಹಜರು ಸಾಕ್ಷಿಯಾದ ಶ್ರೀ ಎಸ್.ಮುಕುಂದ ನಾಯ್ಕ್,ಪೊಲೀಸ್ ನಿರೀಕ್ಷಕರು,ಕರಾವಳಿ ಪೊಲೀಸ್ ಕಾವಲು ಪಡೆ,ಮಂಗಳೂರು ವಿಭಾಗ ಇವರು ದಿ:26–08–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:28–06–2006ರಿಂದ 07–04–2008ರವರೆಗೆ ಪುತ್ತೂರು ನಗರ ಪೊಲೀಸ್ ಠಾಣೆಯ ಪೊಲೀಸ್ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿ:09-11-2006ರಂದು ಠಾಣಾ ಪ್ರಭಾರದಲ್ಲಿದ್ದು, ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಯವರೊಂದಿಗೆ ಇಲಾಖಾ ಜೀಪಿನಲ್ಲಿ ಬೋಳವಾರು ಹಳೆಯ ಆರ್.ಟಿ.ಒ ಜಂಕ್ಷನ್ ಬಳಿ ರಸ್ತೆಗಾವಲು ನಡೆಸುತ್ತಿದ್ದಾಗ ರಾತ್ರಿ ಸುಮಾರು 9–00ಗಂಟೆ ಸಮಯದಲ್ಲಿ ಹಾರಾಡಿ ಕಡೆಯಿಂದ ಕಬಕ ಕಡೆಗೆ ಒಂದು ಮಾರುತಿ 800 ಕಾರನ್ನು ಸಂಶಯದ ಮೇರೆಗೆ ನಿಲ್ಲಿಸಲು ಸೂಚನೆ ನೀಡಿದಾಗ ಸದ್ರಿ ಕಾರನ್ನು ಚಾಲಕ ಮುಂದಕ್ಕೆ ಚಲಾಯಿಸಿಕೊಂಡು, ತಮ್ಮ ಇಲಾಖಾ ಜೀಪಿನಲ್ಲಿ ಬೆನ್ನಟ್ಟಿ, ಏರ್ಮಾಳ್ ಕಡೆಗೆ ಹೋಗುವ ರಸ್ತೆಯ ಬಳಿ ಮಾರುತಿ ಕಾರನ್ನು ಓವರ್ ಟೇಕ್ ಮಾಡಿ, ಜೀಪನ್ನು ರಸ್ತೆಗೆ ಅಡ್ಡಿ ಇಟ್ಟು ನಿಲ್ಲಿಸಿದೆವು. ಆಗ ಸದ್ರಿ ಕಾರಿನಲ್ಲಿದ್ದ ಇಬ್ಬರು ವ್ಯಕ್ತಿಗಳು ಕಾರಿನಿಂದ ಇಳಿದು, ಓಡಲು ಪ್ರಾರಂಭಿಸಿ, ಸಿಬ್ಬಂದಿಯವರ ಸಹಾಯದಿಂದ ಬೆನ್ನಟ್ಟಿ, ಪಂಚರ ಸಮಕ್ಷಮ ಮಾರುತಿ ಕಾರನ್ನು ಪರಿಶೀಲಿಸಿದಾಗ ಅದರಲ್ಲಿ ತಲಾ 500 ರಂತೆ ಒಟ್ಟು 11 ಪ್ಲಾಸ್ಟಿಕ್ ಗೋಣಿ ಚೀಲಗಳು ಪತ್ತೆಯಾದವು. ಚಾಲಕನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಒಬ್ಬ ಹ್ಯಾರಿಸ್ ಬಿನ್:ಅಬೂಬಕ್ಕರ್, ಮತ್ತೊಬ್ಬ ಹ್ಯಾರಿಸ್ ಬಿನ್:ಇಬ್ರಾಹಿಂ ಎಂದು ತಿಳಿಸಿದನು. ಸದ್ರಿ ಸಾರಾಯಿ ಸ್ಯಾಚೆಟ್‌ಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಮಾದರಿ ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು, ಅದಕ್ಕೆ ಬಟ್ಟೆದಾರ ಕಟ್ಟಿ, ಎಸ್.ಹೆಚ್.ಒ ಅರಗು ಸೀಲು ಹಾಕಿ,ಪಂಚರ ಹಾಗೂ ತನ್ನ ಸಹಿಯನ್ನು ಚೀಟಿಗೆ ಅಂಟಿಸಿರುತ್ತಾರೆ. ಸದರಿ ಸಾರಾಯಿಯನ್ನು ಎಲ್ಲಿಂದ ತರಲಾಗಿದೆ ಎಂದು ವಿಚಾರಿಸಿದಾಗ ಪುತ್ತೂರು ತಾಲೂಕು ಸಾರಾಯಿ ಗುತ್ತಿಗೆದಾರರ ಕೆಲಸದವರಾದ ಸತೀಶ್, ಸಿದ್ದಾರ್ಥ, ಜಯರಾಜ್ ಇವರು ಎ.ಪಿ.ಎಂ.ಸಿ ರಸ್ತೆ, ರೈಲ್ವೆ ಗೇಟ್ ಬಳಿ, ಜೀಪ್ ಸಂ:ಕೆಎ–19ಎ–5742 ರಲ್ಲಿ ಕೊಟ್ಟಿದ್ದು, ಇದನ್ನು ಖರೀದಿಸಿ , ಕೇರಳ ಕಾಸರಗೋಡಿಗೆ ಮಾರಾಟ ಮಾಡಲೆಂದು, ಸಾಗಾಟ ಮಾಡಿರುವುದು ಎಂದು ಆರೋಪಿಗಳು ತಿಳಿಸಿರುತ್ತಾರೆ. ನಂತರ ಪಂಚರ ಸಮಕ್ಷಮ ಕಾರು ಮತ್ತು ಸಾರಾಯಿ ಸ್ಯಾಚೆಟ್‌ಗಳನ್ನು ಸ್ವಾಧೀನಪಡಿಸಿಕೊಂಡು, ಆರೋಪಿಗಳ ವಿರುದ್ಧ ಪ್ರಕರಣ ದಾಖಲಿಸುವಂತೆ ಪುತ್ತೂರು ನಗರ ಪೊಲೀಸ್ ಠಾಣೆ ಇವರ ಅಪರಾಧ ಸಂ:147/2006ರಂತೆ ಪ್ರಕರಣವನ್ನು ದಾಖಲಿಸಿ, ಮಾನ್ಯ ನ್ಯಾಯಾಲಯಕ್ಕೂ ವರದಿ ಕಳುಹಿಸಿಕೊಟ್ಟಿರುತ್ತಾರೆ. ಸ್ಥಳದಲ್ಲೇ ತಯಾರಿಸಿದ ಮಹಜರನ್ನು ನಿಶಾನೆ ಪಿ–1 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಆರ್.ಸಿ.ಮಾಲೀಕರು ಹಾಜರಿರುವುದಿಲ್ಲ. ಹಾಗೂ ಅವರ ಪರ ವಕೀಲರು ಹಾಜರಿದ್ದು, ಪಾಟೀ ಸವಾಲು ನಡೆಸಲು ಮುಂದಾಗದೆ ಇರುವ ಕಾರಣ ಮುಖ್ಯವಿಚಾರಣೆಯೊಂದಿಗೆ ಪಾಟೀ ಸವಾಲು ಇಲ್ಲವೆಂದು ತೀರ್ಮಾನಿಸಲಾಯಿತು.

**ಪ್ರಾ.ಸಾ:2**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ ಯಾಕೂಬ್ ಖಾನ್,ಅಬಕಾರಿ ಉಪ ನಿರೀಕ್ಷಕರು,ಪುತ್ತೂರು ವಲಯ ಇವರು ದಿ:26–08–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು 2005 ರಿಂದ ಇಲ್ಲಿಯವರೆಗೆ ಪುತ್ತೂರು ವಲಯ ಕಚೇರಿಯಲ್ಲಿ ಅಬಕಾರಿ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಈ ಪ್ರಾಧಿಕಾರದ ಆದೇಶದ ಅನುಸಾರ ತಕ್ಷೀರಿಗೆ ಸಂಬಂಧಿಸಿದ ದಾಖಲಾತಿಗಳನ್ನು ಹಾಗೂ ವಾಹನಗಳನ್ನು ಮತ್ತು ಸಾರಾಯಿ ಸ್ಯಾಚೆಟ್‌ಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಹಸ್ತಾಂತರಿಸಿದ್ದು, ಹಸ್ತಾಂತರ ಸಮಯದಲ್ಲಿ ಮಹಜರನ್ನು ತಯಾರಿಸಿ, ಸ್ವೀಕೃತಿಯನ್ನು ನೀಡಲಾಗಿರುತ್ತದೆ. ಮಾದರಿ ಮೊಹರು ಹಾಗೂ ಕೋರಿಕೆ ಪತ್ರದೊಂದಿಗೆ ತಮ್ಮ ಅಬಕಾರಿ ರಕ್ಷಕರ

ಮುಖಾಂತರ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿರುತ್ತದೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂ:ಕೆಎ-05ಎಂ-3705 ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು, ಸದರಿ ಪತ್ರದಂತೆ ಅವರು ಬಿ.ಅಬ್‌ಸ್ಟ್ರಾಕ್ಟ್ ವರದಿಯನ್ನು ದಿ:21-12-2006 ರಂದು ನೀಡಿರುತ್ತಾರೆ. ರಾಸಾಯನಿಕ ತಜ್ಞರ ವರದಿಯನ್ನು ದಿ:20-12-2006 ರಂದು ಪಡೆದಿರುತ್ತೇನೆ. ಈ ಪ್ರಾದಿಕಾರದ ಆದೇಶದ ಅನುಸಾರ ಮಹೀಂದ್ರ ಜೀಪು ಸಂ:ಕೆ.ಎ-19ಎ-5742ನ್ನು ರೂ.1,00,000/- ಬ್ಯಾಂಕ್ ಗ್ಯಾರೆಂಟಿ ಆಧಾರದ ಮೇಲೆ ಮದ್ಯಂತರ ಬಿಡುಗಡೆ ಮಾಡಲು ಆದೇಶಿಸಿರುವುದರಿಂದ ಸದ್ರಿ ಆದೇಶದಂತೆ ವಾಹನವನ್ನು ಅರ್ಜಿದಾರರ ಸುಪರ್ದಿಗೆ ದಿ:18-6-2007 ರಂದು ಹಸ್ತಾಂತರ ಮಾಡಿರುತ್ತೇನೆ. ದಿ:08-01-2007ರಂದು ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಿದ ತನಿಖಾ ವರದಿಯನ್ನು ನಿಶಾನೆ ಪಿ-2 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ-2 ಎ ಎಂದು ಗುರುತಿಸಲಾಯಿತು. ಕೆ.ಎ05-ಎ-3705 ಮಾರುತಿ 800 ಕಾರಿನ ಬಿ.ಅಬ್‌ಸ್ಟ್ರಾಕ್ಟ್ ವರದಿಯನ್ನು ನಿಶಾನೆ ಪಿ-3 ಎಂದು ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಆರ್.ಸಿ.ಮಾಲೀಕರು ಹಾಜರಿರುವುದಿಲ್ಲ. ಹಾಗೂ ಅವರ ಪರ ವಕೀಲರು ಹಾಜರಿದ್ದು, ಪಾಟೀ ಸವಾಲು ನಡೆಸಲು ಮುಂದಾಗದೆ ಇರುವ ಕಾರಣ ಮುಖ್ಯವಿಚಾರಣೆಯೊಂದಿಗೆ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:09-11-2006 ರಂದು ಜಪ್ತುಪಡಿಸಿಕೊಂಡಿರುವ ಮಾರುತಿ 800 ಕಾರು ನಕಲಿ ನೊಂದಣಿ ಸಂಖ್ಯೆ: ಕೆಎ-05ಎಂ-3705 ರಲ್ಲಿ ಅಕ್ರಮವಾಗಿ 100 ಎಂ.ಎಲ್ ನ 5500 ಸಾರಾಯಿ ಸ್ಯಾಚೆಟ್‌ಗಳನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಮಾರುತಿ 800 ಕಾರು ಸಂ: ಕೆಎ-05ಎಂ-3705 ರ ಮಾಲೀಕತ್ವದ ಬಗ್ಗೆ ತಕ್ಷೀರು ದಾಖಲಿಸಿ ಸುಮಾರು ಎರಡೂವರೆ ವರ್ಷ ಕಳೆದರೂ ವಾಹನ ಮಾಲೀಕರ ಪರ ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಹಾಗೂ ಇನ್ನೊಂದು ವಾಹನ ಮಹೀಂದ್ರ ಜೀಪ್ ಸಂ: ಕೆಎ-19-ಎ-5742 ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ನಂತರ ಈ ಪ್ರಾಧಿಕಾರದ ಮುಂದೆ ಸಾಕ್ಷಿ ವಿಚಾರಣೆಗಾಗಿ ಹಾಜಾರಾಗದೇ ಇರುವ ಕಾರಣ ಆರ್.ಸಿ ಮಾಲೀಕರಾದ ಶ್ರೀ ಅಬ್ಬಾಸ್ ಇವರು ತನ್ನ ನಿರಪರಾಧವನ್ನು ಸಾಬೀತುಪಡಿಸುವಲ್ಲಿ ವಿಫಲರಾಗಿರುತ್ತಾರೆ. ಆದಕಾರಣ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣದಲ್ಲಿ ಪೊಲೀಸ್ ಉಪ ನಿರೀಕ್ಷಕರು,ಪುತ್ತೂರು ಪೊಲೀಸ್ ಠಾಣೆ,ಪುತ್ತೂರು ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ ಪುತ್ತೂರು ಸಾರಾಯಿ ಗುತ್ತಿಗೆದಾರರ ನೌಕರರಿಂದ ಎ.ಪಿ.ಎಂ.ಸಿ ರಸ್ತೆಯ ರೈಲ್ವೆ ಬಳಿ ವಾಹನ ಸಂ:ಕೆಎ-19-ಎ-5742 ರಲ್ಲಿ ಆರೋಪಿಗಳಿಗೆ ತಂದು ಕೊಟ್ಟಿದ್ದು,ನಂತರ ಆರೋಪಿಗಳು ಮಾರುತಿ 800 ಕಾರು ಸಂ: ಕೆಎ-05ಎಂ-3705 ರಲ್ಲಿ ಅಕ್ರಮವಾಗಿ ಕೇರಳ ರಾಜ್ಯಕ್ಕೆ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆ ಮಾಡುವಾಗ ವಾಹನಗಳನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಸಾರಾಯಿ ಎಂದು ದೃಢಪಟ್ಟಿದ್ದು, ಸದರಿ ವಾಹನಗಳನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂ: ಕೆಎ-05ಎಂ-3705 ರ ಸಂಖ್ಯೆಯ ಬಿ ಅಬ್‌ಸ್ಟ್ರಾಕ್ಟ್ ವರದಿಯ ಪ್ರಕಾರ ಸದ್ರಿ ನೊಂದಣಿ ಸಂಖ್ಯೆಯ ಬಜಾಜ್ ಆಟೋರಿಕ್ಷಾವಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರಿನ ಚಾಸಿಸ್ ನಂಬರ್ ಹಾಗೂ ಇಂಜಿನ್ ನಂಬರಿಗೂ,ಬಿ.ಎಕ್ಸ್‌ಟ್ರಾಕ್ಟ್ ವರದಿಯ ನಂಬರ್‌ಗಳಿಗೆ ಒಂದಕ್ಕೊಂದು ತಾಳೆಯಾಗಿರುವುದಿಲ್ಲ. ಆದುದರಿಂದ ಆರೋಪಿಗಳು ಮಾರುತಿ

800 ಕಾರು ಸಂ:ಕೆಎ–05ಎಂ–3705 ರಲ್ಲಿ ಅಕ್ರಮವಾಗಿ ನಕಲಿ ನಂಬರನ್ನು ಅಳವಡಿಸಿ, ಕೇರಳ ರಾಜ್ಯಕ್ಕೆ ಸಾರಾಯಿ ಸಾಗಾಟ ಮಾಡಿರುವುದು ಸಾಬೀತಾಗಿರುತ್ತದೆ. ಸದ್ರಿ ವಾಹನವನ್ನು ವಶಪಡಿಸಿಕೊಂಡು ಈಗಾಗಲೇ ಎರಡೂವರೆ ವರ್ಷ ಕಳೆದರೂ ಆರೋಪಿಯಾಗಲೀ ಅಥವಾ ವಾಹನ ಮಾಲೀಕರಾಗಲೀ ಹಾಗೂ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಪುತ್ತೂರು ಪೊಲೀಸ್ ಠಾಣೆ,ಪುತ್ತೂರು ವಲಯ ಹಾಗೂ ಈ ಪ್ರಾಧಿಕಾರದ ಮುಂದೆ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ಯಾರೂ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ.

ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ವಾಹನ ಮಹೀಂದ್ರ ಜೀಪ್ ಸಂ:ಕೆಎ–19ಎ–5742 ರಲ್ಲಿ ಸಾಗಾಟ ಮಾಡಿ, ಸದ್ರಿ ಮೇಲಿನ ವಾಹನಕ್ಕೆ ಹಸ್ತಾಂತರಿಸಿರುವುದು ಹಾಗೂ ಈ ಬಗ್ಗೆ ವಾಹನದ ಆರ್.ಸಿ ಮಾಲೀಕರು ಈ ಪ್ರಾಧಿಕಾರದ ಮುಂದೆ ತಾತ್ಕಾಲಿಕ ಬಿಡುಗಡೆಗೆ ಅರ್ಜಿ ಸಲ್ಲಿಸಿದ್ದು, ಸದ್ರಿ ಅರ್ಜಿಯನ್ನು ಪುರಸ್ಕರಿಸಿ, ಈ ಪ್ರಾಧಿಕಾರದ ಆದೇಶ ದಿ:22–2–2007ರ ಆದೇಶದಂತೆ ರೂ.1,00,000/– ಬ್ಯಾಂಕ್ ಗ್ಯಾರೆಂಟಿ ಆಧಾರದ ಮೇಲೆ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿರುತ್ತದೆ. ಆದರೆ, ಇದುವರೆಗೂ ಸರ್ಕಾರದ ಅಭಿಯೋಜನ ಪರ ಸಾಕ್ಷಿದಾರರಿಗೆ ಹಾಗೂ ವಾಹನದ ಮಾಲೀಕರಿಗೆ ಹಾಜರಾತಿ ನೋಟೀಸುಗಳನ್ನು ನೀಡಲಾಗಿದ್ದು, ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಹಾಗೂ ಮಧ್ಯಂತರ ಆದೇಶದ ಷರತ್ತುಗಳನ್ನು ಪಾಲಿಸಿರುವುದಿಲ್ಲ. ಹಾಗೂ ವಾಹನದ ಮಾಲೀಕರ ಪರ ವಕೀಲರು ಹಾಜರಿದ್ದು, ಅಭಿಯೋಜನೆ ವಿಚಾರಣೆಯನ್ನು ಮುಂದುವರಿಸಲು ಅವರು ಉತ್ಸುಕರಾಗಿರುವುದಿಲ್ಲವೆಂದು ಲಿಖಿತವಾಗಿ ಈ ಪ್ರಾಧಿಕಾರದಲ್ಲಿ ದಿ:26–8–2009ರಂದು ಅರ್ಜಿ ಒಪ್ಪಿಸಿರುತ್ತಾರೆ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮಿಂದ ಯಾವುದೇ ಅಭ್ಯಂತರವಿಲ್ಲವೆಂದು ಹಾಗೂ ವಾದ ವಿವಾದವಿಲ್ಲವೆಂದು ಈ ಪ್ರಾಧಿಕಾರದ ಮುಂದೆ ಲಿಖಿತ ಮನವಿ ಸಲ್ಲಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರು, ಪ್ರಕರಣದ ಮುಖ್ಯ ಮಹಜರು ಸಾಕ್ಷಿದಾರರು ಹಾಗೂ ತಕ್ಷೀರಿಗೆ ಸಂಬಂಧಿಸಿದ ತನಿಖಾಧಿಕಾರಿಗಳ ಹೇಳಿಕೆಗಳನ್ನು ಪರಿಗಣಿಸಿ, ಪ್ರಕರಣ ಪತ್ತೆಯಾದ ಸ್ಥಳ ಮಹಜರು,ತನಿಖಾ ವರದಿ ಹಾಗೂ ಪ್ರಕರಣದ ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ಎರಡು ವಾಹನಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಹೀಂದ್ರ ಜೀಪ್ ಸಂ:ಕೆಎ–19ಎ–5742 ಮತ್ತು ನಕಲಿ ನೊಂದಣಿ ಸಂಖ್ಯೆಯ ಮಾರುತಿ 800 ಕಾರು ಸಂ: ಕೆಎ–05ಎಂ–3705 ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/183/ಡಿಟಿಸಿಆರ್/2006-07 ದಿ: 28ನೇ ಆಗಸ್ಟ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪೊಲೀಸ್ ಉಪ ನಿರೀಕ್ಷಕರು,ಪುತ್ತೂರು ಪೊಲೀಸ್ ಠಾಣೆ,ಪುತ್ತೂರು ಇವರ ತಕ್ಷೀರು ಸಂ: 147/2006 ದಿ:09-11-2006 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟಕ್ಕೆ ಬಳಸಿದ ಮಹೀಂದ್ರ ಜೀಪ್ ಸಂ:ಕೆಎ–19ಎ–5742 ಮತ್ತು ಮಾರುತಿ 800 ಕಾರು ನಕಲಿ ನೊಂದಣಿ ಸಂ: ಕೆಎ–05ಎಂ–3705 ಗಳನ್ನು ನಿಯಮ 43ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದ ಮಧ್ಯಂತರ ಆದೇಶ ದಿ:22-2-2007ರಂದು ವಾಹನ ಬಿಡುಗಡೆಗೊಳಿಸಿ ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಮಹೀಂದ್ರ ಜೀಪ್ ಸಂ:ಕೆಎ–19ಎ–5742 ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ,ಪುತ್ತೂರು ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ನೀಡಿರುವ ಬ್ಯಾಂಕ್ ಗ್ಯಾರಂಟಿ ಮೊತ್ತ ರೂ.1,00,000/– ವನ್ನು ಸರಕಾರಕ್ಕೆ ಪಡೆದು ಚಲನ್ ಮೂಲಕ ಖಜಾನೆಗೆ ಪಾವತಿಸಿಕೊಳ್ಳಲು ಆದೇಶಿಸಿದೆ.

ಈ ಆದೇಶವನ್ನು ದಿ:28-08-2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

**ಪ್ರಾ.ಸಾ–1:** ಶ್ರೀ ಎಸ್.ಮುಕುಂದ ನಾಯ್ಕ್, ಪೊಲೀಸ್ ನಿರೀಕ್ಷಕರು, ಕರಾವಳಿ ಪೊಲೀಸ್ ಕಾವಲು ಪಡೆ,ಮಂಗಳೂರು ವಿಭಾಗ.

**ಪ್ರಾ.ಸಾ–2:** ಶ್ರೀ ಯಾಕೂಬ್ ಖಾನ್, ಅಬಕಾರಿ ಉಪ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರು.

ನಿಶಾನೆ ಪಿ–1ಎ : ಮಹಜರಿನಲ್ಲಿ ಮಹಜರು ಸಾಕ್ಷಿದಾರರ ಸಹಿ

ನಿಶಾನೆ ಪಿ–2 : ತನಿಖಾ ವರದಿ

ನಿಶಾನೆ ಪಿ–2ಎ : ತನಿಖಾ ವರದಿಯಲ್ಲಿರುವ ತನಿಖಾಧಿಕಾರಿಯವರ ಸಹಿ.

ನಿಶಾನೆ ಪಿ–3 : ಮಾರುತಿ 800 ಕಾರು ಸಂ:ಕೆಎ–05ಎಂ–3705 ರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿ.

ನಿಶಾನೆ ಪಿ–4 : ರಾಸಾಯನಿಕ ವಿಶ್ಲೇಷಣಾ ವರದಿ

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.949

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,**
**ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/282/ಡಿಟಿಸಿಆರ್/2008–09 ದಿನಾಂಕ:22ನೇ ಆಗಸ್ಟ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಪಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ಪುತ್ತೂರು ವಲಯ, ಪುತ್ತೂರು.

**ಆರೋಪಿಗಳು:**
ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**
ಶ್ರೀ.ಸದಾನಂದ ನಾಯ್ಕ್, ಬಿನ್:ಎಸ್.ಕೆ.ನಾಯ್ಕ್, ಫ್ಲ್ಯಾಟ್ ನಂ:4,
ಸನ್ ಸೈನ್ ಅಪಾರ್ಟ್ ಮೆಂಟ್, ಬಂಟ್ಸ್ ಹಾಸ್ಟೆಲ್ ರೋಡ್,
ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:9-3-2009 ರಂದು ಬೆಳಿಗ್ಗೆ 3-00 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಪುತ್ತೂರು ತಾಲೂಕು ಪಾಣಾಜೆ ಗ್ರಾಮದ ರೆಂಜ್ಯಾ ಸುಳ್ಯಪದವು ರಸ್ತೆಯ ನಿಡ್ಡೋಳಿ ರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ, ರೆಂಜ್ಯಾದಿಂದ ಸುಳ್ಯಪದವು ಕಡೆಗೆ ಒಂದು ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959 ವೇಗವಾಗಿ ಬರುತ್ತಿರುವುದನ್ನು ಕಂಡು ಸದರಿ ಕಾರನ್ನು ನಿಲ್ಲಿಸದೆ ವೇಗವಾಗಿ ಮುಂದಕ್ಕೆ ಚಲಾಯಿಸಿಕೊಂಡು ಹೋದಾಗ, ತಮ್ಮ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ನಿಡ್ಡೋಳಿ ಹಾಲು ಉತ್ಪಾದಕರ ಸಂಘದ ಒಂದು ಕಿ.ಮೀ. ಮುಂದೆ ರಸ್ತೆಯ ಎಡಭಾಗದಲ್ಲಿ ಕಾರನ್ನು ನಿಲ್ಲಿಸಿ ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾನೆ. ಅನುಮಾನಗೊಂಡು ಸದರಿ ಕಾರನ್ನು ಪರಿಶೀಲಿಸುವ ಸಲುವಾಗಿ ತೀರ್ಮಾನಿಸಿ, ಈ ಬಗ್ಗೆ ವಾಹನ ಶೋಧನೆ ಮಾಡಲು ಮಾನ್ಯ ನ್ಯಾಯಾಲಯದಿಂದ ಶೋಧನೆ ವಾರಂಟ್ ಪಡೆಯಲು ಕಾಲಾವಕಾಶಯಿಲ್ಲದ ಕಾರಣ ಹಾಗೂ ಸ್ಥಳದ ಸುತ್ತಮುತ್ತ ಯಾವುದೇ ಸ್ವತಂತ್ರ ಸಾಕ್ಷಿಗಳು ದೊರಕದೇ ಇರುವುದರಿಂದ, ಇಲಾಖಾ ಸಿಬ್ಬಂದಿಯವರ ಸಮಕ್ಷಮ ಒಂದು ಶೋಧನಾ ಮೆಮೊವನ್ನು ತಯಾರಿಸಿ ಶೋಧನಾ ಕ್ರಮವನ್ನು ಜರುಗಿಸಲಾಯಿತು. ಕಾರಿನ ಬಾಗಿಲು ತೆರೆದು ನೋಡಿದಾಗ ಅದರ ಹಿಂದಿನ ಸೀಟಿನ

ಕೆಳಗೆ ಹಾಗೂ ಸೀಟಿನ ಮೇಲೆ ಒಟ್ಟು ನಕಲಿ ಮದ್ಯ ತುಂಬಿದ 13 ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು. ಒಂದೊಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್‌ನ 48 ಸೀಸೆಗಳಂತೆ ಒಟ್ಟು 7 ಪೆಟ್ಟಿಗೆಗಳಲ್ಲಿ ವಿಂಡ್ಸರ್ ವಿಸ್ಕಿ ಮತ್ತು 180 ಎಂ.ಎಲ್ ನ 48 ಸೀಸೆಗಳಂತೆ ಒಟ್ಟು 6 ಪೆಟ್ಟಿಗೆಗಳಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿ ಇದ್ದು, ಅಬಕಾರಿ ಆಯುಕ್ತರು ಕರ್ನಾಟಕ ರಾಜ್ಯ,ಬೆಂಗಳೂರುರವರಿಂದ ಸಹಿ ಮಾಡಲಾದ ಯಾವುದೇ ಭದ್ರತಾ ಚೀಟಿಗಳನ್ನು ಅಂಟಿಸದೇ ಇದ್ದ ಕಾರಣ ಅದು ನಕಲಿ ಮದ್ಯವೆಂದು ಖಚಿತವಾಯಿತು. ಕಾರಿನ ಮುಂಭಾಗದ ಡ್ಯಾಶ್ ಬೋರ್ಡಿನಲ್ಲಿ ಪರಿಶೀಲಿಸಲಾಗಿ, ನೊಕಿಯಾ ಮೊಬೈಲ್ ಸೆಟ್ ಇದ್ದು, ವಾಹನದಲ್ಲಿ ಮದ್ಯ ಸಾಗಾಟ ಮಾಡಲು ಯಾವುದೇ ರಹದಾರಿ ಅಥವಾ ಪರವಾನಗಿ ಮತ್ತು ಲೈಸೆನ್ಸ್ ಇದ್ದಿರುವುದಿಲ್ಲ. ನಂತರ ಪಂಚರ ಸಮಕ್ಷಮ ಸದ್ರಿ ಮದ್ಯದಿಂದ 180 ಮಿಲಿಯ ಒಟ್ಟು 13 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಸದ್ರಿ ಬಾಟಲಿಗಳಿಗೆ ಬಟ್ಟೆದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಿ, ಮಾದರಿಗಾಗಿ ತೆಗೆಯಲಾಯಿತು. ಸದರಿ ವಾಹನದಲ್ಲಿ ಯಾವುದೇ ರಹದಾರಿ ಅಥವಾ ಬಿಲ್ಲುಗಳು ದೊರಕದ ಕಾರಣ, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14, 15 ರ ಪ್ರಕಾರ ಅಪರಾಧವಾಗಿದ್ದು, ಕಲಂ 32,34 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಮದ್ಯ ಹಾಗೂ ಸಾಗಾಟಕ್ಕೆ ಬಳಸಿದ ಮಾರುತಿ 800 ಕಾರು ಸಂಖ್ಯೆ:ಕೆಎ–19ಪಿ–7959 ಹಾಗೂ ನೊಕಿಯಾ ಮೊಬೈಲ್ ಫೋನನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಓಡಿ ಹೋದ ಆರೋಪಿಗಳ ವಿರುದ್ಧ ತಕ್ಷೀರು ಸಂ:12/2008-09 ದಿ:09-03-2009 ರಂತೆ ಮೊಕದ್ದಮೆಯನ್ನು ದಾಖಲಿಸಿ ಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ:ಸಿಆರ್‌ಎಂ/ 49/2008-09 ದಿ:25-7-2009 ರ ವರದಿಯಲ್ಲಿ ವಶಪಡಿಸಿಕೊಂಡ ನಕಲಿ ಮದ್ಯದ ಸೀಸೆಗಳಿಂದ ತೆಗೆದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ:ಇ–98-13 ದಿ:4-5-2009 ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.36 ಇದ್ದು, ಮದ್ಯವು ಮಾನವನ ಸೇವನೆಗೆ ಯೋಗ್ಯವಲ್ಲವೆಂದು ದೃಢೀಕರಣ ಪತ್ರ ನೀಡಿರುತ್ತಾರೆ.ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959 ರ ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಲ್ಲಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆಯಲು ಸಂಪರ್ಕಿಸಿ, ಅವರು ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ನೀಡಿದ್ದು, ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ಸದರಿ ವಾಹನದ ನೋಂದಣಿ ಮಾಲೀಕ ಶ್ರೀ ಸದಾನಂದ ನಾಯ್ಕ್,ಬಿನ್:ಎಸ್.ಕೆ ನಾಯ್ಕ್,ಪ್ಲ್ಯಾಟ್ ನಂ.4,ಸನ್‌ಶೈನ್ ಅಪಾರ್ಟ್‌ಮೆಂಟ್ಸ್,ಬಂಟ್ಸ್‌ಹಾಸ್ಟೆಲ್ ರೋಡ್, ಮಂಗಳೂರು ಆಗಿರುತ್ತಾರೆ. ಹಾಗೂ ಚಾಸೀಸ್ ನಂಬರು KA-19N-1073 ಮತ್ತು ಇಂಜಿನ್ ನಂ: FSBIN1519627 ಆಗಿರುತ್ತದೆ.ಹಾಗೂ ವಾಹನದ ಈಗಿನ ಮೌಲ್ಯ ರೂ.80,000 ಗಳಾಗಬಹುದೆಂದು,ಮೋಟಾರು ವಾಹನನಿರೀಕ್ಷಕರು, ಪುತ್ತೂರು ಇವರ ಮೌಲ್ಯಮಾಪನ ಪತ್ರ ಸಂಖ್ಯೆ ದಿ:15–06–2009ರಂದು ದೃಢೀಕರಣ ಪತ್ರ ನೀಡಿರುತ್ತಾರೆ. ಅಬಕಾರಿ ನಿರೀಕ್ಷಕರ ತನಿಖಾ ವರದಿಯಲ್ಲಿ ವಾಹನದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರಾದ ಶ್ರೀ ಸದಾನಂದ ನಾಯ್ಕ್ ಇವರಿಗೆ ಕಾರಣ ಕೇಳಿ ನೋಟೀಸನ್ನು ಸದ್ರಿ ವಿಳಾಸಕ್ಕೆ ನೀಡಲಾಗಿದ್ದು,ನೋಟೀಸ್ ಜಾರಿಯಾಗದೇ ಹಿಂದೆ ಬಂದಿರುತ್ತದೆ.ನಂತರ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ಕೆನರಾ ಬ್ಯಾಂಕ್, ವೆಲೆನ್ಸಿಯಾ,ಮಂಗಳೂರು ಇವರನ್ನು ಸಂಪರ್ಕಿಸಿ, ಸದ್ರಿಯವರು ಕೆನರಾ ಬ್ಯಾಂಕ್‌ನ ಉದ್ಯೋಗಸ್ಥರಾಗಿದ್ದು, ಸದ್ರಿಯವರು ದಿ:01–04–2007 ರಂದು ಮೃತಪಟ್ಟಿರುವುದಾಗಿ ತಿಳಿಸಿರುತ್ತಾರೆ.ತದನಂತರ ಸದರಿ ವಿಳಾಸಕ್ಕೆ ಖುದ್ದಾಗಿ ಭೇಟಿ ನೀಡಿ ಸದ್ರಿಯವರ ಪತ್ನಿಗೆ ತಮ್ಮ ಪತಿಯವರ ಹೆಸರಿನಲ್ಲಿರುವ ವಾಹನವು ಮೊಕದ್ದಮೆಯಲ್ಲಿ ವಶಪಡಿಸಿ ಕೊಂಡಿರುವ ಬಗ್ಗೆ ತಿಳಿಸಲಾಗಿದ್ದು, ಅವರು ತನ್ನ ಪತಿಯ ಮರಣ ಪ್ರಮಾಣ ಪತ್ರವನ್ನು ನೋಟರಿಯಿಂದ ದೃಢೀಕರಿಸಿ, ಒಪ್ಪಿಸಿರುತ್ತಾರೆ.ಆದರೆ ಸದ್ರಿ ವಾಹನವು ದಿವಂಗತರಾದ ಶ್ರೀ ಸದಾನಂದ ನಾಯ್ಕ್ ಇವರಿಂದ ತನ್ನ ಪತ್ನಿಗೆ ವರ್ಗಾವಣೆಯಾದ ಬಗ್ಗೆ ಯಾವುದೇ ದಾಖಲಾತಿಗಳನ್ನು ಹಾಜರುಪಡಿಸಿರುವುದಿಲ್ಲ.ಹಾಗೂ ವಾಹನದ ಬಗ್ಗೆ ಯಾವುದೇ ಉತ್ಸುಕರಾಗಿಲ್ಲದೇ ಹಾಗೂ ವಾಹನದ ಬಿಡುಗಡೆಗಾಗಿ ಇದುವರೆಗೂ ಅವರ ಪರ ವಕೀಲರ ಮುಖಾಂತರ ತಮ್ಮ ಕಚೇರಿಗೆ ಇದುವರೆಗೂ ಅರ್ಜಿ ಸಲ್ಲಿಸಿರುವುದಿಲ್ಲ.ಆದುದರಿಂದ ಸದ್ರಿ ವಾಹನವನ್ನು ವಶಪಡಿಸಿಕೊಂಡು ಈಗಾಗಲೇ 6 ತಿಂಗಳು ಕಳೆದರೂ ತಮ್ಮ ಕಚೇರಿಯಲ್ಲಿ ಆರೋಪಿಯಾಗಲಿ ಅಥವಾ ವಾಹನದ ಮಾಲೀಕರ ಪರ ಬೇರೆ ಯಾರೂ ವ್ಯಕ್ತಿಯು ಹಾಗೂ ಅವರ ಪರ ವಕೀಲರು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಹಾಗೂ ಸೊತ್ತುಗಳ ಬಿಡುಗಡೆಗಾಗಿ ಯಾರೂ ಅಧಿಕೃತ ದಾಖಲಾತಿಗಳೊಂದಿಗೆ ಇದುವರೆಗೂ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಈ ಕೆಳಕಂಡ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ನಕಲಿ ಮದ್ಯವನ್ನು

ನಾಶಪಡಿಸಲು, ವಾಹನ ಮತ್ತು ಮೊಬೈಲ್‌ನ್ನು ವಿಲೇವಾರಿಗೊಳಿಸಲು ಸೂಕ್ತ ಆದೇಶ ನೀಡಬೇಕೆಂದು ತಮ್ಮ ತನಿಖಾ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

**ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳು;**

1) ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959
2) ವಿಂಡ್ಸರ್ ವಿಸ್ಕಿ 180 ಎಂ.ಎಲ್‌ನ 336 ಸೀಸೆಗಳು– 60.480 ಲೀಟರ್
3) ಒರಿಜಿನಲ್ ಚಾಯ್ಸ್ ವಿಸ್ಕಿ 180ಎಂ.ಎಲ್‌ನ 288 ಸೀಸೆಗಳು–51.840ಲೀ.
4) ನೋಕಿಯೊ ಮೊಬೈಲ್ ಫೋನ್:1

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

1) ಮೊದಲನೇ ವಿವಾದಾಂಶ: ದಿ: 9-3-2009 ರಂದು ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2) ಎರಡನೇ ವಿವಾದಾಂಶ: ಸದರಿ ವಾಹನದಲ್ಲಿ ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

3) ಮೂರನೇ ವಿವಾದಾಂಶ: ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀ ಶಿವಪ್ರಸಾದ್, ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ,ಪುತ್ತೂರು ಇವರು ದಿ:12-08-09 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಸೆಪ್ಟೆಂಬರ್ 2005 ರಿಂದ ಇಲ್ಲಿಯವರೆಗೆ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಅಬಕಾರಿ ಉಪ ಅಧೀಕ್ಷಕರ ಆದೇಶದಂತೆ ತಮ್ಮ ಸಿಬ್ಬಂದಿಯವರೊಂದಿಗೆ ದಿ:09-03-2009 ರಂದು ಬೆಳಿಗ್ಗೆ 3-00 ಗಂಟೆ ಸಮಯದಲ್ಲಿ ಪುತ್ತೂರು ತಾಲೂಕು ಪಾಣಾಜೆ ಗ್ರಾಮದ ರೆಂಜ್ಯಾ ಸುಳ್ಯಪದವು ರಸ್ತೆಯ ನಿಡ್ಪೋಳಿ ರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ, ರೆಂಜ್ಯಾದಿಂದ ಸುಳ್ಯಪದವು ಕಡೆಗೆ ಒಂದು ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959 ವೇಗವಾಗಿ ಬರುತ್ತಿರುವುದನ್ನು ಕಂಡು ಸದರಿ ಕಾರನ್ನು ನಿಲ್ಲಿಸದೆ ವೇಗವಾಗಿ ಮುಂದಕ್ಕೆ ಚಲಾಯಿಸಿಕೊಂಡು ಹೋದಾಗ, ತಮ್ಮ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ನಿಡ್ಪೋಳಿ ಹಾಲು ಉತ್ಪಾದಕರ ಸಂಘದ ಒಂದು ಕಿ.ಮೀ. ಮುಂದೆ ರಸ್ತೆಯ ಎಡಭಾಗದಲ್ಲಿ ಕಾರನ್ನು ನಿಲ್ಲಿಸಿ ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾನೆ. ಅನುಮಾನಗೊಂಡು ಸದರಿ ಕಾರನ್ನು ಪರಿಶೀಲಿಸುವ ಸಲುವಾಗಿ ತೀರ್ಮಾನಿಸಿ, ಈ ಬಗ್ಗೆ ವಾಹನ ಶೋಧನೆ ಮಾಡಲು ಮಾನ್ಯ ನ್ಯಾಯಾಲಯದಿಂದ ಶೋಧನೆ ವಾರಂಟ್ ಪಡೆಯಲು ಕಾಲಾವಕಾಶಯಿಲ್ಲದ ಕಾರಣ ಹಾಗೂ ಸ್ಥಳದ ಸುತ್ತಮುತ್ತ ಯಾವುದೇ ಸ್ವತಂತ್ರ ಸಾಕ್ಷಿಗಳು ದೊರೆಯದೆ ಇರುವುದರಿಂದ, ಇಲಾಖಾ ಸಿಬ್ಬಂದಿಯವರ ಸಮಕ್ಷಮ ಒಂದು ಶೋಧನಾ ಮೆಮೊವನ್ನು ತಯಾರಿಸಿ ಶೋಧನಾ ಕ್ರಮವನ್ನು ಜರುಗಿಸಲಾಯಿತು. ಕಾರಿನ ಬಾಗಿಲು ತೆರೆದು ನೋಡಿದಾಗ ಅದರ ಹಿಂದಿನ ಸೀಟಿನ ಕೆಳಗೆ ಹಾಗೂ ಸೀಟಿನ ಮೇಲೆ ಒಟ್ಟು 13 ನಕಲಿ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು. ಒಂದೊಂದು ಪೆಟ್ಟಿಗೆಯಲ್ಲಿ 180 ಎಂ.ಎಲ್ ನ 48 ಸೀಸೆಗಳಂತೆ ಒಟ್ಟು 7 ಪೆಟ್ಟಿಗೆಗಳಲ್ಲಿ ವಿಂಡ್ಸರ್ ವಿಸ್ಕಿ ಮತ್ತು 180 ಎಂ.ಎಲ್ ನ 48 ಸೀಸೆಗಳಂತೆ ಒಟ್ಟು 6 ಪೆಟ್ಟಿಗೆಗಳಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿ ಇದ್ದು, ಅಬಕಾರಿ ಆಯುಕ್ತರು ಕರ್ನಾಟಕ ರಾಜ್ಯ,ಬೆಂಗಳೂರು ರವರಿಂದ ಸಹಿ ಮಾಡಲಾದ ಯಾವುದೇ ಭದ್ರತಾ ಚೀಟಿಗಳನ್ನು ಅಂಟಿಸದೇ ಇದ್ದ ಕಾರಣ ಅದು ನಕಲಿ ಮದ್ಯವೆಂದು ಖಚಿತವಾಯಿತು. ಕಾರಿನ ಮುಂಭಾಗದ ಡ್ಯಾಶ್ ಬೋರ್ಡಿನಲ್ಲಿ ಪರಿಶೀಲಿಸಲಾಗಿ, ನೊಕಿಯಾ ಮೊಬೈಲ್ ಸೆಟ್ ಇದ್ದು, ವಾಹನದಲ್ಲಿ ಮದ್ಯ ಸಾಗಾಟ ಮಾಡಲು ಯಾವುದೇ ರಹದಾರಿ ಅಥವಾ ಪರವಾನಗಿ ಮತ್ತು ಲೈಸೆನ್ಸ್ ಇದ್ದಿರುವುದಿಲ್ಲ. ನಂತರ ಪಂಚರ ಸಮಕ್ಷಮ ಸದ್ರಿ ಮದ್ಯದಿಂದ ಒಟ್ಟು 13 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಸದ್ರಿ ಬಾಟಲಿಗಳಿಗೆ ಬಟ್ಟೆ ದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಿ, ಮಾದರಿಗಾಗಿ ತೆಗೆಯಲಾಯಿತು. ಸದರಿ ವಾಹನದಲ್ಲಿ ಯಾವುದೇ ರಹದಾರಿ ಅಥವಾ

ಬಿಲ್ಲುಗಳು ದೊರಕದ ಕಾರಣ, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14, 15 ರ ಪ್ರಕಾರ ಅಪರಾಧವಾಗಿದ್ದು, ಕಲಂ 32,34 ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಮದ್ಯ ಹಾಗೂ ಸಾಗಾಟಕ್ಕೆ ಬಳಸಿದ ಮಾರುತಿ 800 ಕಾರು ಸಂಖ್ಯೆ:ಕೆಎ–19ಪಿ–7959 ಹಾಗೂ ನೊಕಿಯಾ ಮೊಬೈಲ್ ಫೋನನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಮುಂಜಾನೆ 3–00 ಗಂಟೆಯಿಂದ 4–00ಗಂಟೆಯವರೆಗೆ ಸ್ಥಳದಲ್ಲಿಯೇ ತಯಾರಿಸಲಾಯಿತು. ಸದ್ರಿ ಮಹಜರನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದನ್ನು ನಿಶಾನೆ ಪಿ–1 ಎಂದು ಹಾಗೂ ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು.ನಂತರ ಸೊತ್ತುಗಳ ಸಮೇತ ಕಚೇರಿಗೆ ಬಂದು, ಪ್ರಥಮ ಮಾಹಿತಿ ವರದಿಯನ್ನು ದಾಖಲಿಸಿಕೊಂಡು,ಅದನ್ನು ನಿಶಾನೆ ಪಿ–2 ಎಂದು ಹಾಗೂ ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ನಂತರ ಪ್ರಕರಣದ ತನಿಖೆಯನ್ನು ಕೈಗೊಂಡು ಜಪ್ತುಪಡಿಸಿದ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ದಿ:09–03–2009ರಂದು ತಮ್ಮ ಅಬಕಾರಿ ರಕ್ಷಕರಾದ ಶ್ರೀ ಪುರುಷೋತ್ತಮರವರ ಮೂಲಕ ಕಳುಹಿಸಿಕೊಡಲಾಗಿದ್ದು, ಅವರಿಂದ ದಿ:23–05–2009ರಂದು ಪಡೆಯಲಾಗಿದೆ. ಅದನ್ನು ನಿಶಾನೆ ಪಿ–3 ಎಂದು ಗುರುತಿಸಲಾಗಿದೆ. ವಾಹನದ ನೊಂದಣಿ ಮಾಲೀಕರ ಮಾಹಿತಿ ಪಡೆಯುವ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ,ಮಂಗಳೂರು ಇವರಿಗೆ ದಿ:10–03–2009ರಂದು ಪತ್ರ ಬರೆಯಲಾಗಿದ್ದು, ಬಿ ಅಬ್‌ಸ್ಟ್ರಾಕ್ಟ್ ವರದಿಯ ಪ್ರಕಾರ ಶ್ರೀ ಸದಾನಂದ ನಾಯ್ಕ್, ಬಿನ್:ಎಸ್.ಕೆ ನಾಯ್ಕ್, ಪ್ಲ್ಯಾಟ್ ನಂ.4,ಸನ್‌ಶೈನ್ ಅಪಾರ್ಟ್‌ಮೆಂಟ್ಸ್, ಬಂಟ್ಸ್‌ಹಾಸ್ಟೆಲ್ ರೋಡ್, ಮಂಗಳೂರು ಇವರಿಗೆ ಸೇರಿದ್ದಾಗಿದ್ದು, ಸದ್ರಿ ವರದಿಯಲ್ಲಿ ನಮೂದಿಸಿರುವ ನೊಂದಣಿ ಮಾಲೀಕರಿಗೆ ದಿ:24–3–2009ರಂದು ತಮ್ಮ ಕಚೇರಿಯಿಂದ ನೊಟೀಸು ನೀಡಲಾಗಿದ್ದು, ಸದ್ರಿ ನೊಟೀಸು ಸದ್ರಿ ವಿಳಾಸದಲ್ಲಿ ವಾಸ್ತವವಿಲ್ಲ ಎಂದು ಹಿಂದಕ್ಕೆ ಬಂದಿರುತ್ತದೆ. ಬಿ.ಅಬ್‌ಸ್ಟ್ರಾಕ್ಟ್ ವರದಿಯನ್ನು ಈ ಪ್ರಾದಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಗಿದೆ. ಈ ಬಗ್ಗೆ ತನಿಖೆಯನ್ನು ಮುಂದುವರಿಸುತ್ತಾ ಬಿ.ಅಬ್‌ಸ್ಟ್ರಾಕ್ಟ್ ವರದಿಯಲ್ಲಿ ಹೆಚ್.ಪಿ.ಎ ದಾರರಾದ ಕೆನರಾ ಬ್ಯಾಂಕ್,ವೆಲೆನ್ಸಿಯಾ,ಮಂಗಳೂರು ಶಾಖೆ ಇವರನ್ನು ಸಂಪರ್ಕಿಸಿ, ಇವರ ಪ್ರಕಾರ ವಾಹನದ ನೊಂದಣಿ ಮಾಲೀಕ ಶ್ರೀ ಸದಾನಂದ ನಾಯ್ಕ್ ಇವರು ದಿ:01–04–2007 ರಂದು ನಿಧನರಾಗಿರುತ್ತಾರೆ ಎಂಬ ಮಾಹಿತಿಯನ್ನು ಸಲ್ಲಿಸಿರುತ್ತಾರೆ.ಸದ್ರಿ ಮಾಹಿತಿಯನ್ನು ದೃಢಪಡಿಸುವ ಸಲುವಾಗಿ ಮತ್ತೊಮ್ಮೆ ಸದ್ರಿಯವರ ಮನೆಗೆ ಖುದ್ದಾಗಿ ಭೇಟಿ ನೀಡಿ, ಸದ್ರಿಯವರ ಧರ್ಮಪತ್ನಿಯವರಲ್ಲಿ ವಿಚಾರಿಸಿದಾಗ ವಿಷಯ ಸತ್ಯವಾಗಿರುತ್ತದೆ. ಅವರ ಪತಿಯು ದೈವಾಧೀನರಾಗಿರುವ ಬಗ್ಗೆ ಮರಣ ಪ್ರಮಾಣ ಪತ್ರವನ್ನು ನೀಡಿರುತ್ತಾರೆ. ಅದನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು,ಅದನ್ನು ನಿಶಾನೆ ಪಿ–5 ಎಂದು ಗುರುತಿಸಲಾಗಿದೆ. ತಕ್ಷೀರಿನಲ್ಲಿ ವಶಪಡಿಸಿಕೊಂಡ ತಮ್ಮ ವಾಹನವು ಅಬಕಾರಿ ಮೊಕದ್ದಮೆಯಲ್ಲಿ ವಶಪಡಿಸಿಕೊಳ್ಳಲಾಗಿದೆ ಎಂಬ ವಿಷಯವನ್ನು ತಿಳಿಸಲಾಗಿದ್ದು, ಆದರೆ ಅವರು ಯಾವುದೇ ಪ್ರತಿಕ್ರಿಯೆಯನ್ನು ನೀಡಿರುವುದಿಲ್ಲ. ಹಾಗೂ ವಾಹನದ ಬಗ್ಗೆ ಹೇಳಿಕೆಗಳನ್ನು ನೀಡಲು ಸೂಚಿಸಿದಾಗ ಅವರು ಹೇಳಿಕೆಗಳನ್ನು ನೀಡಲು ನಿರಾಕರಿಸಿರುತ್ತಾರೆ. ಹಾಗೂ ಸದ್ರಿಯವರಿಗೆ ಕಚೇರಿಗೆ ಬಂದು ನೀಡುವಂತೆ ಮೌಖಿಕವಾಗಿ ಸೂಚಿಸಿದರೂ ಸದ್ರಿಯವರು ಇದುವರೆಗೂ ಹೇಳಿಕೆಯನ್ನು ನೀಡಿರುವುದಿಲ್ಲ. ಇಷ್ಟರತನಕ ವಾಹನದ ಮಾಲೀಕರಾಗಲೀ, ಆರೋಪಿಗಳಾಗಲೀ ಅವರ ಪರ ವಕೀಲರಾಗಲೀ ಅಥವಾ ವಾಹನದ ಬಿಡುಗಡೆಗಾಗಿ ಯಾರೊಬ್ಬರೂ ಸಹಾ ಈ ಪ್ರಾದಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ವಾಹನದಲ್ಲಿ ಅಕ್ರಮ ನಕಲಿ ಮದ್ಯ ಸಾಗಾಟವಾಗಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಂತಿಮ ತನಿಖಾ ವರದಿಯನ್ನು ಈ ಪ್ರಾಧಿಕಾರಕ್ಕೆ ದಿ:16–06–2009ರಂದು ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ನಿಶಾನೆ ಪಿ–6 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–6 ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲಿ ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:09-03-2009 ರಂದು ಜಪ್ತುಪಡಿಸಿಕೊಂಡಿರುವ ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959 ರಲ್ಲಿ ಅಕ್ರಮವಾಗಿ 111-960 ಲೀಟರ್ ಮದ್ಯವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರ ಪರ ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆಗಾಗಿ

ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ, ಪುತ್ತೂರು ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ನಕಲಿ ಮದ್ಯ ಎಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959 ನ್ನು ವಶಪಡಿಸಿಕೊಂಡು ಸುಮಾರು 6 ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಪುತ್ತೂರು ವಲಯ ಕಚೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ಅಧಿಕೃತ ದಾಖಲಾತಿಗಳೊಂದಿಗೆ ವಾಹನ ಮಾಲೀಕರ ಪರ ಹಾಗೂ ಪರಾರಿಯಾದ ಆರೋಪಿಗಳು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ತನಿಖಾಧಿಕಾರಿಯವರು ಖುದ್ದಾಗಿ ವಾಹನದ ಬಿ ಅಬ್‌ಸ್ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರ ಮನೆಗೆ ಸಂಪರ್ಕಿಸಿ, ವಾಹನದ ನೊಂದಣಿ ಮಾಲೀಕರಾದ ಶ್ರೀ ಸದಾನಂದ ನಾಯ್ಕ್ ಇವರು ನಿಧನ ಹೊಂದಿರುತ್ತಾರೆ ಎಂದು ಅವರ ಪತ್ನಿಯವರು ತಿಳಿಸಿದ್ದು, ಈ ಬಗ್ಗೆ ಮರಣ ಪ್ರಮಾಣ ಪತ್ರವನ್ನು ಒಪ್ಪಿಸಿರುತ್ತಾರೆ. ತಮ್ಮ ವಾಹನವನ್ನು ಅಬಕಾರಿ ಮೊಕದ್ದಮೆಗೆ ಸಂಬಂಧಿಸಿ ವಶಪಡಿಸಿಕೊಳ್ಳಲಾಗಿದೆ ಎಂದು ತಿಳಿಸಿದರೂ ಈ ಬಗ್ಗೆ ಯಾವುದೇ ಪ್ರತಿಕ್ರಿಯೆಯನ್ನು ನೀಡಿರುವುದಿಲ್ಲ. ವಾಹನದ ಬಿಡುಗಡೆಗಾಗಿ ಅವರು ಮತ್ತು ಅವರ ಪರ ವಕೀಲರಾಗಲೀ ತಕ್ಷೀರು ದಾಖಲಿಸಿ ಸುಮಾರು 6 ತಿಂಗಳು ಕಳೆದರೂ ಪುತ್ತೂರು ವಲಯ ಕಚೇರಿಯಲ್ಲಿ ಹಾಗೂ ಈ ಪ್ರಾಧಿಕಾರದಲ್ಲಿ ವಾಹನದ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿರುವುದಿಲ್ಲ.ಅವರು ಯಾವುದೇ ಪ್ರತಿಕ್ರಿಯೆಯನ್ನು ನೀಡದಿರುವುದರಿಂದ ವಾಹನದ ಬಗ್ಗೆ ಯಾವುದೇ ಉತ್ಸುಕರಾಗಿರುವುದಿಲ್ಲವೆಂದು ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ರಾಸಾಯನಿಕ ತಜ್ಞರ ವರದಿಯಂತೆ ಹಾಗೂ ಫಿರ್ಯಾದುದಾರರು ಸಲ್ಲಿಸಿದ ಮಹಜರಿನಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದ ಸೀಸೆಗಳ ಮೇಲೆ ಯಾವುದೇ ಸರ್ಕಾರ ಮುದ್ರಿಸಿದ ಲೇಬಲ್‌ಗಳು ಅಂಟಿಸಿರುವುದಿಲ್ಲ ಹಾಗೂ ತಜ್ಞರ ವರದಿಯಂತೆ ಮದ್ಯದ ಮದ್ಯಸಾರ ಪ್ರಮಾಣ ಶೇ.36 ಇದ್ದು, ಇದು ಮಾನವನ ಸೇವನೆಗೆ ಯೋಗ್ಯವಲ್ಲವೆಂದು ದಿ:04–05–2009ರಂದು ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಆದುದರಿಂದ ಸದ್ರಿ ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959 ರಲ್ಲಿ ಅಕ್ರಮವಾಗಿ ನಕಲಿ ಮದ್ಯವನ್ನು ಹೊಂದಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸದ್ರಿ ವಾಹನದ ಬಿಡುಗಡೆಗಾಗಿ ಇದುವರೆಗೂ ಆರೋಪಿಯಾಗಲೀ, ವಾಹನದ ಮಾಲೀಕರ ಪರವಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದ ಮುಂದೆ ವಾಹನವನ್ನು ಬಿಡುಗಡೆಗೊಳಿಸಲು ಅರ್ಜಿ ಸಲ್ಲಿಸಿರುವುದಿಲ್ಲ. ವಾಹನದಲ್ಲಿ ಅಕ್ರಮವಾಗಿ ನಕಲಿ ಮದ್ಯ ಸಾಗಾಟವಾಗಿರುವುದರಿಂದ ತಕ್ಷೀರಿನಲ್ಲಿ ವಶಪಡಿಸಿಕೊಂಡ ಎಲ್ಲಾ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ 111-960 ಲೀಟರ್ ನಕಲಿ ಮದ್ಯವನ್ನು ಹಾಗೂ ಸಾಗಾಟಕ್ಕೆ ಬಳಸಿದ ಮಾರುತಿ 800 ಕಾರು ಸಂಖ್ಯೆ: ಕೆಎ–19–ಪಿ–7959ನ್ನು ಹಾಗೂ ಮೊಬೈಲ್ ಫೋನನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

